# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಫೆಬ್ರವರಿ ೨೦, ೨೦೧೪ (ಫಾಲ್ಗುಣ ೧, ಶಕ ವರ್ಷ ೧೯೩೫)<br>Bangalore, Thursday, February 20, 2014 (Phalguna 1, Shaka Varsha 1935) | ಸಂಚಿಕೆ ೮<br>Issue 8 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಆಲಮಟ್ಟಿ ಅಣೆಕಟ್ಟನ್ನು 524.25 ಮೀ.ಗೆ ಎತ್ತರಿಸುವುದರಿಂದ ಮುಳುಗಡೆಯಾಗುವ ಪ್ರದೇಶದ ಭೂಸ್ವಾಧೀನ, ಪುನರ್‌ವಸತಿ ಹಾಗೂ ಪುನರ್ ನಿರ್ಮಾಣ ಕಾಮಗಾರಿಗಳನ್ನು ಚುರುಕುಗೊಳಿಸಲು ಹಾಗೂ ಕಾಮಗಾರಿಗಳನ್ನು ವ್ಯವಸ್ಥಿತವಾಗಿ ನಡೆಸಲು ಉನ್ನತ ಅಧಿಕಾರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ರವರ ಪತ್ರ ಸಂಖ್ಯೆ: ವ್ಯನಿ/ಕೃಭಾಜನಿನಿ/ತಾಂತ್ರಿಕ–3/106/2013–14/290, ದಿನಾಂಕ: 13–08–2013.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಅಂತರ ರಾಜ್ಯ ಜಲ ವಿವಾದ ಕಾಯ್ದೆ 1956 (1956 ಕಾಯ್ದೆ) ರಡಿ ಅವಕಾಶವಿರುವಂತೆ ದಿನಾಂಕ:02–04–2004ರ ಅಧಿಸೂಚನೆಯಡಿ ರಚಿಸಲಾದ ಕೃಷ್ಣಾ ಜಲ ವಿವಾದ ನ್ಯಾಯಾಧೀಕರಣ–2 ದಿನಾಂಕ: 30–12–2010ರಂದು ಪ್ರಕಟಿಸಲಾದ ಐತೀರ್ಪಿನಲ್ಲಿ ಕರ್ನಾಟಕ ರಾಜ್ಯಕ್ಕೆ 177 ಟಿಎಂಸಿ ನೀರು ಹಂಚಿಕೆ ಮಾಡಿದ್ದು, ಜಲಾಶಯದ ಎತ್ತರವನ್ನು 519.60ಮೀ.ನಿಂದ 524.25ಮೀ.ವರೆಗೆ ಎತ್ತರಿಸುವುದು ಒಳಗೊಂಡಿರುತ್ತದೆ. ಅದರಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದಲ್ಲಿ ಅನುಷ್ಠಾನಗೊಳಿಸಬೇಕಾಗಿರುವ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ಕ್ಕೆ 130.90 ಟಿಎಂಸಿ ಹಂಚಿಕೆ ಮಾಡಲಾಗಿದ್ದು, ಈ ಯೋಜನೆಯಡಿ 9 ಉಪ ಯೋಜನೆಗಳು ಒಳಗೊಂಡಿರುತ್ತದೆ. ಈ ಯೋಜನೆ ಹಂತ–3ರ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಬರ ಪೀಡಿತ ಪ್ರದೇಶಗಳಾದ ಬಾಗಲಕೋಟೆ, ಬಿಜಾಪೂರ, ಗುಲ್ಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಸುಮಾರು 5.30 ಲಕ್ಷ ಹೆಕ್ಟರ್ ನೀರಾವರಿ ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ರೂ.17,207.00 ಕೋಟಿಗಳ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿ (Detailed Project Report)ಗೆ ಸರ್ಕಾರದ ಆದೇಶ ಸಂಖ್ಯೆ: ಜಸಂಇ 139 ಕೆಬಿಎನ್ 2010, ದಿನಾಂಕ: 24–01–2012ರಲ್ಲಿ ತಾತ್ವಿಕ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–1 ಮತ್ತು ಹಂತ–2ರ ಅನುಷ್ಠಾನದ ಸಂದರ್ಭದಲ್ಲಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆಯಾಗುವ ಬಾಗಲಕೋಟೆ ಪಟ್ಟಣಕ್ಕೆ ಸಂಬಂಧಿಸಿದಂತೆ ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರದ ರಚನೆ ಹಾಗೂ ನಿಗಮಿತಗೊಳಿಸಲು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಉನ್ನತ ಅಧಿಕಾರ ಪರಿಶೀಲನಾ ಸಮಿತಿಯನ್ನು 1985ರಲ್ಲಿ ರಚಿಸಲಾಗಿತ್ತು.

2013–14ನೇ ಸಾಲಿನ ಪರಿಷ್ಕೃತ ಆಯವ್ಯಯದ ಮಂಡನೆಯಲ್ಲಿ ನೀರಾವರಿ ಸಾಮರ್ಥ್ಯ ಕಲ್ಪಿಸುವ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ–3ರ ಭೂಸ್ವಾಧೀನ ಹಾಗೂ ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕುರಿತು ಮಾನ್ಯ ಮುಖ್ಯಮಂತ್ರಿಗಳು ಈ ಕೆಳಗಿನಂತೆ ಘೋಷಣೆ ಮಾಡಿರುತ್ತಾರೆ.

"ಆಲಮಟ್ಟಿ ಅಣೆಕಟ್ಟನ್ನು 524.25 ಮೀಟರ್‌ಗೆ ಎತ್ತರಿಸುವುದರಿಂದ ಮುಳುಗಡೆಯಾಗುವ ಪ್ರದೇಶದ ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕಾಮಗಾರಿಗಳನ್ನು ಚುರುಕುಗೊಳಿಸಲಾಗುವುದು. ಈ ಕಾಮಗಾರಿಗಳನ್ನು ವ್ಯವಸ್ಥಿತವಾಗಿ ನಡೆಸಲು ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗುವುದು."

ಮಾನ್ಯ ಮುಖ್ಯಮಂತ್ರಿಗಳು ಪರಿಷ್ಕೃತ ಆಯವ್ಯಯದ ಮಂಡನೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗುವುದೆಂದು ಘೋಷಿಸಿದ್ದು, ಈ ಮೇಲೆ ವಿವರಿಸಿರುವಂತೆ ಹಿಂದೆ 1985ರಲ್ಲಿ ರಚಿಸಲಾಗಿದ್ದ ಸಮಿತಿಯನ್ನು ಪುನರ್ ರಚಿಸುವುದು ಅತ್ಯವಶ್ಯವಾಗಿದೆ ಎಂದು ಪರಿಗಣಿಸಿ, ಪ್ರಸ್ತುತ ವಾಸ್ತುಸ್ಥಿತಿ ಹಾಗೂ ಕಾರ್ಯವ್ಯಾಪ್ತಿಗೆ ಅನುಗುಣವಾಗಿ ಉನ್ನತ ಅಧಿಕಾರ ಸಮಿತಿಯನ್ನು ರಚಿಸಲು ಸರ್ಕಾರ ನಿರ್ಧರಿಸಿದ್ದು, ಅದರಂತೆ ಉನ್ನತ ಅಧಿಕಾರಿ ಸಮಿತಿಯನ್ನು ರಚಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 133 ಆರ್‌ಇಹೆಚ್ 2013(ಭಾಗ-1), ಬೆಂಗಳೂರು, ದಿನಾಂಕ : 29-10-2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರಡಿಯಲ್ಲಿ ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 524.25 ಮೀಟರ್‌ಗೆ ಎತ್ತರಿಸುವ ಹಿನ್ನೆಲೆಯಲ್ಲಿ ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಹಾಗೂ ಈ ಯೋಜನೆಯಡಿಯ ಕಾಮಗಾರಿಗಳನ್ನು ನಿಗಧಿತ ಕಾಲಮಿತಿಯೊಳಗೆ ಕೈಗೆತ್ತಿಕೊಂಡು ಪೂರ್ಣಗೊಳಿಸಿ, ಕ್ರಿಯಾ ಯೋಜನೆಯಂತೆ ನೀರಾವರಿ ಸಾಮರ್ಥ್ಯ ಕಲ್ಪಿಸಲು ಈ ಕೆಳಗಿನಂತೆ ಉನ್ನತ ಅಧಿಕಾರ ಸಮಿತಿಯನ್ನು ರಚಿಸಿ ಕೂಡಲೇ ಜಾರಿಗೆ ಬರುವಂತೆ ಆದೇಶಿಸಿದೆ:-

| | | |
|---|---|---|
| 1 | ಸನ್ಮಾನ್ಯ ಮುಖ್ಯಮಂತ್ರಿಗಳು | ಅಧ್ಯಕ್ಷರು |
| 2 | ಮಾನ್ಯ ಜಲಸಂಪನ್ಮೂಲ ಸಚಿವರು | ಉಪಾಧ್ಯಕ್ಷರು |
| 3 | ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು | ಸದಸ್ಯರು |
| 4 | ಮಾನ್ಯ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರು ಹಾಗೂ ಬಾಗಲಕೋಟೆ ಜಿಲ್ಲಾ ಉಸ್ತುವಾರಿ ಸಚಿವರು | ಸದಸ್ಯರು |
| 5 | ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವರು | ಸದಸ್ಯರು |
| 6 | ಮಾನ್ಯ ಕಂದಾಯ ಸಚಿವರು | ಸದಸ್ಯರು |
| 7 | ಮಾನ್ಯ ಲೋಕೋಪಯೋಗಿ ಸಚಿವರು | ಸದಸ್ಯರು |
| 8 | ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು | ಸದಸ್ಯರು |
| 9 | ಮಾನ್ಯ ಪೌರಾಡಳಿತ ಸಚಿವರು | ಸದಸ್ಯರು |
| 10 | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಸದಸ್ಯರು |
| 11 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು | ಸದಸ್ಯರು |
| 12 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | ಸದಸ್ಯರು |
| 13 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 14 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ, | ಸದಸ್ಯರು |
| 15 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 16 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 17 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 18 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಇಂಧನ ಇಲಾಖೆ | ಸದಸ್ಯರು |
| 19 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 20 | ಸರ್ಕಾರದ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |
| 21 | ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ | ಸದಸ್ಯರು |
| 22 | ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ | ಸದಸ್ಯರು |
| 23 | ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ | ಸದಸ್ಯರು |
| 24 | ಆಯುಕ್ತರು, ಕೃಷ್ಣಾ ಮೇಲ್ದಂಡೆ ಯೋಜನೆ, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಬಾಗಲಕೋಟೆ | ಸದಸ್ಯರು |
| 25 | ನಿರ್ದೇಶಕರು/ಆಯುಕ್ತರು, ಪೌರಾಡಳಿತ ಇಲಾಖೆ | ಸದಸ್ಯರು |
| 26 | ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ | ಸದಸ್ಯ ಕಾರ್ಯದರ್ಶಿ |

ಈ ಉನ್ನತ ಮಟ್ಟದ ಸಮಿತಿಯು ಕೃಷ್ಣಾ ಮೇಲ್ದಂಡೆ ಯೋಜನೆ ಹಂತ-3ರ ಯೋಜನೆಗೆ ಭೂಸ್ವಾಧೀನ ಪ್ರಕ್ರಿಯೆ ಹಾಗೂ ಪುನರ್ವಸತಿ ಮತ್ತು ಪುನರ್ ನಿರ್ಮಾಣದ ಪ್ರಗತಿಯ ಪರಿಶೀಲನೆ ಮಾಡುವುದು ಹಾಗೂ ಕುಂದುಕೊರತೆಗಳು ಮತ್ತು ಅಡೆತಡೆಗಳ ನಿವಾರಣೆಗೆ ಸಂಬಂಧಪಟ್ಟ ಇಲಾಖೆಗೆ ಅಗತ್ಯ ಸೂಚನೆಗಳು / ನಿರ್ದೇಶನಗಳನ್ನು ನೀಡುವುದು ಹಾಗೂ ಯೋಜನೆಗಳನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸಿ, ಭೂಸ್ವಾಧೀನ ಮತ್ತು ಪುನರ್ವಸತಿ ಮತ್ತು ಪುನರ್‌ನಿರ್ಮಾಣವನ್ನು ವ್ಯವಸ್ಥಿತ ರೀತಿಯಲ್ಲಿ ಕೈಗೊಳ್ಳಲು ಹಾಗೂ ಕಾಮಗಾರಿಗಳನ್ನು ಹಂತ ಹಂತವಾಗಿ ಪರಿಶೀಲಿಸಿ ಸಲಹೆಗಳನ್ನು ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್.ಹಂದಿಗೋಳ,**

ಸರ್ಕಾರದ ಅಧೀನ ಕಾರ್ಯದರ್ಶಿ (ಪುನರ್ವಸತಿ),

ಕಂದಾಯ ಇಲಾಖೆ.

PR. 1235

SC-500

## ಕಂದಾಯ ಸಚಿವಾಲಯ

**ವಿಷಯ :** ಆಲಮಟ್ಟಿ ಅಣೆಕಟ್ಟನ್ನು 524.25ಮೀ.ಗೆ ಎತ್ತರಿಸುವುದರಿಂದ ಮುಳುಗಡೆಯಾಗುವ ಪ್ರದೇಶದ ಭೂಸ್ವಾಧೀನ, ಪುನರ್‌ವಸತಿ ಹಾಗೂ ಪುನರ್ ನಿರ್ಮಾಣ ಕಾಮಗಾರಿಗಳನ್ನು ಚುರುಕುಗೊಳಿಸಲು ಹಾಗೂ ಕಾಮಗಾರಿಗಳನ್ನು ವ್ಯವಸ್ಥಿತವಾಗಿ ನಡೆಸಲು ಕ್ರಿಯಾ ಯೋಜನೆ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ವ್ಯನಿ/ಕೃಭಾಜನಿನಿ/ತಾಂತ್ರಿಕ –3/106/2013–14/290, ದಿನಾಂಕ: 13–08–2013.

**ಪ್ರಸ್ತಾವನೆ :**

ಕೇಂದ್ರ ಸರ್ಕಾರವು ಅಂತರ ರಾಜ್ಯ ಜಲ ವಿವಾದ ಕಾಯ್ದೆ 1956 (1956 ಕಾಯ್ದೆ) ಅಡಿ ಅವಕಾಶವಿರುವಂತೆ ದಿನಾಂಕ:02–04–2004 ಅಧಿಸೂಚನೆಯಡಿ ರಚಿಸಲಾದ ಕೃಷ್ಣಾ ಜಲ ವಿವಾದ ನ್ಯಾಯಾಧೀಕರಣ–2 ದಿನಾಂಕ: 30–12–2010ರಂದು ಪ್ರಕಟಿಸಲಾದ ಐತೀರ್ಪಿನಲ್ಲಿ ಕರ್ನಾಟಕ ರಾಜ್ಯಕ್ಕೆ 177 ಟಿಎಂಸಿ ನೀರು ಹಂಚಿಕೆ ಮಾಡಿದ್ದು, ಜಲಾಶಯದ ಎತ್ತರವನ್ನು 519.60ಮೀ.ನಿಂದ 524.25ಮೀ.ವರೆಗೆ ಎತ್ತರಿಸುವುದು ಒಳಗೊಂಡಿರುತ್ತದೆ. ಅದರಲ್ಲಿ ಕೃಷ್ಣಾ ಭಾಗ್ಯ ಜಲ ನಿಗಮದಲ್ಲಿ ಅನುಷ್ಠಾನಗೊಳಿಸಬೇಕಾಗಿರುವ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ಕ್ಕೆ 130.90 ಟಿಎಂಸಿ ಹಂಚಿಕೆ ಮಾಡಲಾಗಿದ್ದು, ಈ ಯೋಜನೆಯಡಿ 9 ಉಪ ಯೋಜನೆಗಳು ಒಳಗೊಂಡಿರುತ್ತದೆ. ಈ ಯೋಜನೆ ಹಂತ–3ರ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಬರ ಪೀಡಿತ ಪ್ರದೇಶಗಳಾದ ಬಾಗಲಕೋಟೆ, ಬಿಜಾಪೂರ, ಗುಲ್ಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಸುಮಾರು 5.30 ಲಕ್ಷ ಹೆಕ್ಟರ್ ನೀರಾವರಿ ಕ್ಷೇತ್ರಕ್ಕೆ ನೀರಾವರಿ ಸೌಲಭ್ಯ ಕಲ್ಪಿಸಲು ರೂ.17,207.00 ಕೋಟಿಗಳ ಅಂದಾಜು ಮೊತ್ತದ ವಿವರವಾದ ಯೋಜನಾ ವರದಿ (Detailed Project Report)ಗೆ ಸರ್ಕಾರದ ಆದೇಶ ಸಂಖ್ಯೆ: ಜಸಂಇ 139 ಕೆಬಿಎನ್ 2010, ದಿನಾಂಕ: 24–01–2012ರಲ್ಲಿ ತಾತ್ವಿಕ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–1 ಮತ್ತು ಹಂತ–2ರ ಅನುಷ್ಠಾನದ ಸಂದರ್ಭದಲ್ಲಿ ಆಲಮಟ್ಟಿ ಜಲಾಶಯದ ಹಿನ್ನೀರಿನಲ್ಲಿ ಮುಳುಗಡೆಯಾಗುವ ಬಾಗಲಕೋಟೆ ಪಟ್ಟಣಕ್ಕೆ ಸಂಬಂಧಿಸಿದಂತೆ ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರದ ರಚನೆ ಹಾಗೂ ನಿಗಮಿತಗೊಳಿಸಲು ಸನ್ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಉನ್ನತ ಅಧಿಕಾರ ಪರಿಶೀಲನಾ ಸಮಿತಿಯನ್ನು 1985ರಲ್ಲಿ ರಚಿಸಲಾಗಿತ್ತು. ಮುಂದುವರೆಸುತ್ತಾ, ಸರ್ಕಾರಿ ಆದೇಶ ಸಂ: ಆರ್‌ಡಿ 255 ಆರ್‌ಇಹೆಚ್ 92, ದಿನಾಂಕ:31–12–1992ರಲ್ಲಿ ಉನ್ನತ ಅಧಿಕಾರ ಪುನರ್ವಸತಿ ಮತ್ತು ಪುನರ್‌ನಿರ್ಮಾಣ ನಿರ್ಣಯ ಸಮಿತಿಯನ್ನು ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವಂತೆ ಕ್ರಿಯಾ ಯೋಜನಾ ಸಮಿತಿಯನ್ನು ರಚಿಸಲು ಪರಿಶೀಲಿಸಲಾಗಿರುತ್ತದೆ.

2013–14ನೇ ಸಾಲಿನ ಪರಿಷ್ಕೃತ ಆಯವ್ಯಯದ ಮಂಡನೆಯಲ್ಲಿ ನೀರಾವರಿ ಸಾಮರ್ಥ್ಯ ಕಲ್ಪಿಸುವ ಹಾಗೂ ಕೃಷ್ಣಾ ಮೇಲ್ದಂಡೆ ಯೋಜನೆಯ ಹಂತ–3ರ ಭೂಸ್ವಾಧೀನ ಹಾಗೂ ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಕುರಿತು ಮಾನ್ಯ ಮುಖ್ಯಮಂತ್ರಿಗಳು ಈ ಕೆಳಗಿನಂತೆ ಘೋಷಣೆ ಮಾಡಿರುತ್ತಾರೆ.

"ಆಲಮಟ್ಟಿ ಅಣೆಕಟ್ಟನ್ನು 524.25 ಮೀಟರ್‌ಗೆ ಎತ್ತರಿಸುವುದರಿಂದ ಮುಳುಗಡೆಯಾಗುವ ಪ್ರದೇಶದ ಭೂಸ್ವಾಧೀನ, ಪುನರ್ವಸತಿ ಹಾಗೂ ಪುನರ್‌ನಿರ್ಮಾಣ ಕಾಮಗಾರಿಗಳನ್ನು ಚುರುಕುಗೊಳಿಸಲಾಗುವುದು. ಈ ಕಾಮಗಾರಿಗಳನ್ನು ವ್ಯವಸ್ಥಿತವಾಗಿ ನಡೆಸಲು ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗುವುದು."

ಮಾನ್ಯ ಮುಖ್ಯಮಂತ್ರಿಗಳು ಪರಿಷ್ಕೃತ ಆಯವ್ಯಯದ ಮಂಡನೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗುವುದೆಂದು ಘೋಷಿಸಿದ್ದು, ಅದರಂತೆ, ಈ ಮೇಲೆ ವಿವರಿಸಿರುವಂತೆ ಹಿಂದೆ 1992ರಲ್ಲಿ ರಚಿಸಲಾಗಿದ್ದ ಸಮಿತಿಯನ್ನು ಪುನರ್ ರಚಿಸುವುದು ಅತ್ಯವಶ್ಯವಾಗಿದೆ ಎಂದು ಪರಿಗಣಿಸಿ, ಪ್ರಸ್ತುತ ವಾಸ್ತುಸ್ಥಿತಿ ಹಾಗೂ ಕಾರ್ಯವ್ಯಾಪ್ತಿಗೆ ಅನುಗುಣವಾಗಿ ಕ್ರಿಯಾ ಯೋಜನೆ ಸಮಿತಿಯನ್ನು ರಚಿಸಲು ಸರ್ಕಾರ ನಿರ್ಧರಿಸಿದ್ದು, ಅದರಂತೆ ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 133 ಆರ್‌ಇಹೆಚ್ 2013(ಭಾಗ–2), ಬೆಂಗಳೂರು, ದಿನಾಂಕ : 29–10–2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕೃಷ್ಣಾ ಮೇಲ್ದಂಡೆ ಯೋಜನೆ ಹಂತ–3ರಡಿಯಲ್ಲಿ ಆಲಮಟ್ಟಿ ಅಣೆಕಟ್ಟಿನ ಎತ್ತರವನ್ನು 524.25 ಮೀಟರ್‌ಗೆ ಎತ್ತರಿಸುವ ಹಿನ್ನೆಲೆಯಲ್ಲಿ ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್‌ನಿರ್ಮಾಣ ಹಾಗೂ ಈ ಯೋಜನೆಯಡಿಯ ಕಾಮಗಾರಿಗಳನ್ನು ನಿಗದಿತ ಕಾಲಮಿತಿಯೊಳಗೆ ಕೈಗೆತ್ತಿಕೊಂಡು ಪೂರ್ಣಗೊಳಿಸಿ, ಕ್ರಿಯಾ ಯೋಜನೆಯಂತೆ ನೀರಾವರಿ ಸಾಮರ್ಥ್ಯ ಕಲ್ಪಿಸಲು ಈ ಕೆಳಗಿನಂತೆ ಕ್ರಿಯಾ ಯೋಜನೆ ಸಮಿತಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ರಚಿಸಿ ಆದೇಶಿಸಿದೆ:–

| | | |
|---|---|---|
| 1 | ಸರ್ಕಾರದ ಮುಖ್ಯ ಕಾರ್ಯದರ್ಶಿಗಳು | ಅಧ್ಯಕ್ಷರು |
| 2 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು | ಉಪಾಧ್ಯಕ್ಷರು |
| 3 | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ | ಸದಸ್ಯರು |
| 6 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ವಸತಿ ಇಲಾಖೆ | ಸದಸ್ಯರು |
| 7 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | ಸದಸ್ಯರು |
| 8 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 9 | ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಜಲಸಂಪನ್ಮೂಲ ಇಲಾಖೆ | ಸದಸ್ಯರು |

| | | |
|---|---|---|
| 10 | ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 11 | ನಿರ್ದೇಶಕರು/ಆಯುಕ್ತರು, ಪೌರಾಡಳಿತ ಇಲಾಖೆ | ಸದಸ್ಯರು |
| 12 | ವ್ಯವಸ್ಥಾಪಕ ನಿರ್ದೇಶಕರು, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ | ಸದಸ್ಯರು |
| 13 | ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ | ಸದಸ್ಯರು |
| 14 | ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ | ಸದಸ್ಯರು |
| 15 | ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ, ಬಾಗಲಕೋಟೆ | ಸದಸ್ಯರು |
| 16 | ನಿರ್ದೇಶಕರು, ಕರ್ನಾಟಕ ಇಂಜಿನೀಯರಿಂಗ್ ಸಂಶೋಧನಾ ಕೇಂದ್ರ, ಕೃಷ್ಣರಾಜ ಸಾಗರ | ಸದಸ್ಯರು |
| 17 | ಪ್ರಧಾನ ವಾಸ್ತುಶಿಲ್ಪಿಗಾರರು, ಕೆ.ಆರ್.ವೃತ್ತ, ಬೆಂಗಳೂರು | ಸದಸ್ಯರು |
| 18 | ಆಯುಕ್ತರು ಮತ್ತು ಪದನಿಮಿತ್ತ ಕಾರ್ಯದರ್ಶಿಗಳು, ಕಂದಾಯ ಇಲಾಖೆ, ಕೃಷ್ಣಾ ಮೇಲ್ದಂಡೆ ಯೋಜನೆ, ಭೂಸ್ವಾಧೀನ, ಪುನರ್ವಸತಿ ಮತ್ತು ಪುನರ್ನಿರ್ಮಾಣ ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಬಾಗಲಕೋಟೆ | ಸದಸ್ಯರು |
| 19 | ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | ಸದಸ್ಯರು |
| 20 | ಮುಖ್ಯ ಇಂಜಿನೀಯರ್, ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಅಣೆಕಟ್ಟು ವಲಯ, ಆಲಮಟ್ಟಿ | ಸದಸ್ಯರು |
| 21 | ಮುಖ್ಯ ಇಂಜಿನೀಯರ್, ಬಾಗಲಕೋಟೆ ಪಟ್ಟಣ ಅಭಿವೃದ್ಧಿ ಪ್ರಾಧಿಕಾರ, ಬಾಗಲಕೋಟೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಲಲಿತಾ ಹೆಚ್.ಹಂದಿಗೋಳ,**

ಸರ್ಕಾರದ ಅಧೀನ ಕಾರ್ಯದರ್ಶಿ (ಪುನರ್ವಸತಿ),

ಕಂದಾಯ ಇಲಾಖೆ.

**PR. 1236**

**SC-500**

## ಕಂದಾಯ ಸಚಿವಾಲಯ

**ವಿಷಯ** : ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 129/2ರಲ್ಲಿ 0.04 ಗುಂಟೆ ಬಿ–ಖರಾಬು ಜಮೀನನ್ನು ಶ್ರೀಮತಿ ಉಷಾ ಶ್ರೀನಿವಾಸನ್ W/o ಡಾ॥ ಶ್ರೀನಿವಾಸನ್, ಬೆಂಗಳೂರು ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**

1. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು, ಇವರ ಪತ್ರ ಸಂಖ್ಯೆ : ಎಲ್.ಎನ್.ಡಿ ಸಿಆರ್/70/08–09 ದಿನಾಂಕ: 24–06–2010.
2. ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್.ಎನ್.ಡಿ.(ಪೂ) ಸಿಆರ್/82/08–09 ದಿನಾಂಕ: 20–10–2010.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 912 ಎಲ್‌ಜಿಬಿ 2010 ದಿನಾಂಕ: 27–09–2012.
4. ಉಪ ವಿಭಾಗಾಧಿಕಾರಿ, ಬೆಂಗಳೂರು ಉತ್ತರ ಉಪ ವಿಭಾಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಎಲ್.ಎನ್.ಡಿ/ಸಿಆರ್/255/2012–13 ದಿನಾಂಕ: 10–01–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.129/2ರ 0.04 ಗುಂಟೆ ಬಿ–ಖರಾಬು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಸೆಕ್ಷನ್68(1)ರ ಅಡಿಯಲ್ಲಿ ದಿನಾಂಕ:20–08–2009ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಹೊರಡಿಸಿದ್ದು, ಈ ಬಗ್ಗೆ ಸಾರ್ವಜನಿಕರಿಂದ ಯಾವುದೇ ಆಕ್ಷೇಪಣೆಗಳು ಹಾಗೂ ತಂಟೆ ತಕರಾರು ಬಂದಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ಪತ್ರದಲ್ಲಿ ವಿಶೇಷ ಜಿಲ್ಲಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ಇವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 129/2ರಲ್ಲಿನ 0.04 ಗುಂಟೆ ಬಿ–ಖರಾಬು ಜಮೀನನ್ನು ಶ್ರೀಮತಿ ಉಷಾ ಶ್ರೀನಿವಾಸನ್ ಬೆಂಗಳೂರು ಇವರಿಗೆ ಮಂಜೂರು ಮಾಡಬಹುದೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ. 129/2ರಲ್ಲಿ 0.04 ಗುಂಟೆ ಬಿ–ಖರಾಬು ಜಮೀನನ್ನು ಮಂಜೂರು ಮಾಡುವ ಮುನ್ನ ಕರ್ನಾಟಕ ಭೂಕಂದಾಯ ಕಾಯ್ದೆ 1964ರ ಸೆಕ್ಷನ್68(5)ರನ್ವಯ ದಿನಾಂಕ:27–09–2012ರಂದು ಅಧಿಸೂಚನೆ ಹೊರಡಿಸಿ ದಿನಾಂಕ:01–11–2012 ರಂದು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (4)ರಲ್ಲಿ ಉಪ ವಿಭಾಗಾಧಿಕಾರಿ, ಬೆಂಗಳೂರು ಉತ್ತರ ಉಪ ವಿಭಾಗ, ಇವರು ಸದರಿ ಜಮೀನಿನ ಮಾರ್ಗಸೂಚಿ ದರ ಎಕರೆಯೊಂದಕ್ಕೆ ರೂ.1.75 ಕೋಟಿಗಳಾಗಿದ್ದು, ಮಾರುಕಟ್ಟೆ ದರ ಎಕರೆಯೊಂದಕ್ಕೆ ರೂ.2.50 ಕೋಟಿಗಳಾಗಿರುತ್ತದೆ ಎಂದು ವರದಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 912 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ : 12-11-2013**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮುನ್ನೇಕೊಳಲು ಗ್ರಾಮದ ಸ.ನಂ.129/2ರ ಜಮೀನಿನ ಮಧ್ಯಭಾಗದಲ್ಲಿರುವ 0.04 ಗುಂಟೆ ವಿಸ್ತೀರ್ಣದ ಬಿ-ಖರಾಬು ಜಮೀನನ್ನು ಮಾರುಕಟ್ಟೆ ದರ ಪ್ರತಿ ಎಕರೆಗೆ ರೂ.2.50 ಕೋಟಿ (ರೂಪಾಯಿ ಎರಡು ಕೋಟಿ ಐವತ್ತು ಲಕ್ಷಗಳು ಮಾತ್ರ) ದರ ಹಾಗೂ ನಿಯಮಾನುಸಾರ ಇತರೆ ಶುಲ್ಕಗಳನ್ನು ವಿಧಿಸಿ ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಶ್ರೀಮತಿ ಉಷಾ ಶ್ರೀನಿವಾಸನ್ W/o. ಡಾ|| ಶ್ರೀನಿವಾಸನ್, ಬೆಂಗಳೂರು ಇವರಿಗೆ ಮಂಜೂರು ಮಾಡಿದೆ.

1. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್‌ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.
2. ಮಂಜೂರಿದಾರರು ಮೂರು ತಿಂಗಳ ಒಳಗೆ ಒಂದೇ ಕಂತಿನಲ್ಲಿ ನಿಗಧಿಪಡಿಸಿರುವ ಮಾರುಕಟ್ಟೆ ದರ ಹಾಗೂ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು.
3. ಷರತ್ತುಗಳ ಉಲ್ಲಂಘನೆ ಪ್ರಕರಣಗಳಲ್ಲಿ ಮಂಜೂರಾತಿ ಆದೇಶವು ತನ್ನಷ್ಟಕ್ಕೆ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ-1).

**PR. 1237**

**SC-100**

## ಕಂದಾಯ ಸಚಿವಾಲಯ

**ವಿಷಯ** : ರಾಮನಗರ ತಾಲ್ಲೂಕು, ಕೈಲಾಂಚ ಹೋಬಳಿ, ಕುಂಬಾರಪುರ ಗ್ರಾಮದ ಸ.ನಂ. 46 ಮತ್ತು ಸ.ನಂ. 16ರಲ್ಲಿನ 1-30 ಎಕರೆ/ಗುಂಟೆ ಬಿ-ಖರಾಬು ಜಮೀನನ್ನು ಕುರುಬರ ಸಂಘ, ರಾಮನಗರ ತಾಲ್ಲೂಕು ಇವರಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರ ಪತ್ರ ಸಂಖ್ಯೆ :ರಾಜಿಕಾ/ಎಲ್‌ಎನ್‌ಡಿ/ಸಿಆರ್/452/09-10 ದಿನಾಂಕ: 06-02-2010.

**ಪ್ರಸ್ತಾವನೆ :**

ಅಧ್ಯಕ್ಷರು, ರಾಮನಗರ ತಾಲ್ಲೂಕು, ಕುರುಬರ ಸಂಘ ಇವರು ದಿನಾಂಕ:28-02-2013ರ ತಮ್ಮ ಮನವಿಯಲ್ಲಿ ರಾಮನಗರ ತಾಲ್ಲೂಕು ಕೈಲಾಂಚ ಹೋಬಳಿ, ಕುಂಬಾರಪುರ ಗ್ರಾಮದ ಸ.ನಂ.16 ರಲ್ಲಿ 1-25ಎಕರೆ/ಗುಂಟೆ ಜಮೀನನ್ನು ರಾಮನಗರ ತಾಲ್ಲೂಕು, ಕುರುಬರ ಸಂಘದ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರ ಇವರು ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ, ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 20ರನ್ವಯ ಪ್ರಸ್ತುತ ಮಾರುಕಟ್ಟೆ ದರವನ್ನು ವಿಧಿಸಿ 1-30 ಎಕರೆ/ಗುಂಟೆ ಜಮೀನನ್ನು ರಾಮನಗರ ತಾಲ್ಲೂಕು, ಕುರುಬರ ಸಂಘಕ್ಕೆ ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಜಮೀನಿನ ಮಾರುಕಟ್ಟೆ ಬೆಲೆ ಎಕರೆಯೊಂದಕ್ಕೆ ರೂ.3.00 ಲಕ್ಷಗಳಾಗಿರುತ್ತದೆಂದು ಸಹ ವರದಿ ಮಾಡಿರುತ್ತಾರೆ. ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 28 ಎಲ್‌ಜಿಬಿ 2013, ಬೆಂಗಳೂರು, ದಿನಾಂಕ : 12-11-2013**

ರಾಮನಗರ ತಾಲ್ಲೂಕು, ಕೈಲಾಂಚ ಹೋಬಳಿ, ಕುಂಬಾರಪುರ ಗ್ರಾಮದ ಸ.ನಂ.16ರಲ್ಲಿ 1-25 ಎಕರೆ/ಗುಂಟೆ ಜಮೀನನ್ನು ರಾಮನಗರ ತಾಲ್ಲೂಕು, ಕುರುಬರ ಸಂಘಕ್ಕೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು, 1969ರ ನಿಯಮ 19(1) ಮತ್ತು 19(3) ರನ್ವಯ ಪ್ರಚಲಿತ ಮಾರ್ಗಸೂಚಿ ದರದ ಮೇಲೆ ಶೇಕಡ 10ರಷ್ಟನ್ನು ವಿಧಿಸಿ ಪ್ರತಿ ಎರಡು ವರ್ಷಗಳಿಗೊಮ್ಮೆ ಗುತ್ತಿಗೆ ದರವನ್ನು ಶೇಕಡ 10ರಷ್ಟನ್ನು ಹೆಚ್ಚಿಸುವ ಮತ್ತು ಗುತ್ತಿಗೆಗೆ ಮಂಜೂರಾಗಿರುವ ಜಮೀನನ್ನು ಸಂಘದ ಕಟ್ಟಡ ಮತ್ತು ಹಿಂದುಳಿದ ವರ್ಗಗಳ ಅನುಕೂಲಕ್ಕಾಗಿ ವಿದ್ಯಾರ್ಥಿ ನಿಲಯ ನಿರ್ಮಿಸಲು ಈ ಕೆಳಕಂಡ ಷರತ್ತಿಗೊಳಪಟ್ಟು 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲಾಗಿದೆ.

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.

6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1).

PR. 1238
SC-50

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಪರಿವೀಕ್ಷಣಾ ವರದಿಗಳನ್ನು ಪರಿಶೀಲಿಸಲು ಅಧ್ಯಕ್ಷರಿಗೆ ನೀಡಲಾಗುವ ಭತ್ಯೆಯನ್ನು ಪುನರ್ ನಿಗದಿ ಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : WRD 10 DSP 2011, Bangalore, Dated : 27-04-2012.
2. ಅಧೀಕ್ಷಕ ಅಭಿಯಂತರು, ಉ ಮತ್ತು ಮೌ ರವರ ಪತ್ರ ಸಂಖ್ಯೆ : SE/M&E/DSRP/AE-1/AEE-3/12-13/773, dated : 22-02-2013.

**ಪೀಠಿಕೆ :**

ಕೇಂದ್ರ ಜಲ ಆಯೋಗದ ಅಣೆಕಟ್ಟು ಸುರಕ್ಷತಾ ಕಾರ್ಯ ವಿಧಾನದ ವರದಿಯ ಅನುಸಾರ ರಾಜ್ಯಗಳು ತಮ್ಮಲ್ಲಿರುವ 15 ಮೀಟರ್‌ಗಿಂತ ಎತ್ತರವಿರುವ ಅಣೆಕಟ್ಟುಗಳು ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯನ್ನು 10 ವರ್ಷಗಳಿಗೆ ಒಂದು ಬಾರಿ ಪರಿಶೀಲಿಸುವ ಸಲುವಾಗಿ ಒಂದು ಶಾಶ್ವತವಾದ ತಜ್ಞರ ಸಮಿತಿಯನ್ನು ನೇಮಿಸಬೇಕಾಗಿದೆ. ಶ್ರೀ ಎ.ಕೆ. ಬಜಾಜ್, ಮಾಜಿ ಅಧ್ಯಕ್ಷರು, ಕೇಂದ್ರ ಜಲ ಆಯೋಗರವರನ್ನು ಅಧ್ಯಕ್ಷರನ್ನಾಗಿಸಿ, ರಾಜ್ಯ ಸುರಕ್ಷತಾ ಪರಿಶೀಲನಾ ಸಮಿತಿಗೆ ಸಂಬಂಧಿಸಿದ ಹಾಲಿ ಸರ್ಕಾರದ ತಿದ್ದುಪಡಿ ಆದೇಶ ದಿನಾಂಕ : 23–01–2007 ರನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಪರಿಷ್ಕರಿಸಲಾಯಿತು. ಅಧ್ಯಕ್ಷರ ಕೋರಿಕೆ ಮೇರೆಗೆ, ಅಧೀಕ್ಷಕ ಅಭಿಯಂತರರು, ಉ ಮತ್ತು ಮೌ, ರವರು, ಡಿ.ಎಸ್.ಆರ್.ಪಿ. ಸಮಿತಿಯು ಪರಿವೀಕ್ಷಣೆ ಮಾಡದ ಸಂದರ್ಭಗಳಲ್ಲಿ, ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳು ನಡೆಸುವ ಪರಿವೀಕ್ಷಣೆಯ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸಲು ಡಿ.ಎಸ್.ಆರ್.ಪಿ. ಅಧ್ಯಕ್ಷರಿಗೆ ನೀಡಲಾಗುತ್ತಿರುವ ಸಂಭಾವನೆಯನ್ನು ಪರಿಷ್ಕರಿಸಲು ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಜಸಂಇ 1 ಅಭಯೋ 2012, ಬೆಂಗಳೂರು, ದಿನಾಂಕ : 11–08–2013/11–09–2013**

15 ಮೀಟರ್‌ಗಿಂತ ಎತ್ತರವಿರುವ ಅಣೆಕಟ್ಟುಗಳು ಅಥವಾ 60 ಮಿಲಿಯನ್ ಘನ ಮೀಟರ್‌ಗಿಂತ ಹೆಚ್ಚು ನೀರು ಶೇಖರಣಾ ಸಾಮರ್ಥ್ಯ ಹೊಂದಿರುವ ಅಣೆಕಟ್ಟುಗಳ ಸುರಕ್ಷತೆಯ ವಿಮರ್ಶೆಗಾಗಿ, ಡಿ.ಎಸ್.ಆರ್.ಪಿ. ಸಮಿತಿ ಸರ್ಕಾರದ ಆದೇಶ ಸಂಖ್ಯೆ : WRD 10 DSP 2011, Bangalore, dated : 27–04–2012 ರನ್ನು ಕೆಳಕಂಡಂತೆ ಪರಿಷ್ಕರಿಸಲಾಗಿದೆ.

ಈ. ಸಮಿತಿಯ ಅಧಿಕಾರೇತರ ಸದಸ್ಯರು ಪರಿವೀಕ್ಷಣೆಯ ನಿಮಿತ್ತ ಕೇಂದ್ರ ಸ್ಥಾನದಿಂದ ಹೊರಗಡೆ ಪ್ರಯಾಣ ಮಾಡಿದಾಗ ಪ್ರವಾಸ ಭತ್ಯೆ ಹಾಗೂ ದಿನ ಭತ್ಯೆಯನ್ನು ಚಾಲ್ತಿಯಲ್ಲಿರುವ ಸರ್ಕಾರಿ ಆದೇಶದಂತೆ ನಿಯಂತ್ರಿಸುವುದು. ಇದಲ್ಲದೆ, ಸಭೆಗಳಲ್ಲಿ ಭಾಗವಹಿಸಿದ/ಪರಿವೀಕ್ಷಣೆಯ ಸಂದರ್ಭದಲ್ಲಿ ಸಮಿತಿಯ ಅಧ್ಯಕ್ಷರಿಗೆ ಪ್ರತಿ ಭೇಟಿಗೆ ರೂ. 9000/– (ಒಂಬತ್ತು ಸಾವಿರ ರೂಪಾಯಿಗಳು) ಹಾಗೂ ಸಮಿತಿಯ ಅಧಿಕಾರೇತರ ಸದಸ್ಯರಿಗೆ ಪ್ರತಿ ಭೇಟಿಗೆ ರೂ. 6500/– (ಆರು ಸಾವಿರದ ಐನೂರು ರೂಪಾಯಿಗಳು) ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಹಾಗೂ, ಸಮಿತಿಯ ಅಧಿಕಾರೇತರ ಸದಸ್ಯರು/ಸಲಹೆಗಾರರು ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳ ಪರಿವೀಕ್ಷಣೆ ಸಂದರ್ಭದಲ್ಲಿ ರೂ. 6500/–ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಮುಂದುವರೆಯುತ್ತ, ಸಮಿತಿಯು ಪರಿವೀಕ್ಷಣೆ ಮಾಡದ ಸಂದರ್ಭಗಳಲ್ಲಿ ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳು ನಡೆಸುವ ಪರಿವೀಕ್ಷಣೆಯ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸಲು ಸಮಿತಿ ಅಧ್ಯಕ್ಷರಿಗೆ ರೂ. 6500/– ಮತ್ತು ಅಧಿಕಾರೇತರ ಸದಸ್ಯರು ರೂ. 4500/– ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ.

ಮೇಲಿನ ಈ) ಜಾಗದಲ್ಲಿ, ಈ ಕೆಳಗಿನಂತೆ ಓದಿಕೊಳ್ಳುವುದು.

ಈ. ಸಮಿತಿಯ ಅಧಿಕಾರೇತರ ಸದಸ್ಯರು ಪರಿವೀಕ್ಷಣೆಯ ನಿಮಿತ್ತ ಕೇಂದ್ರ ಸ್ಥಾನದಿಂದ ಹೊರಗಡೆ ಪ್ರಯಾಣ ಮಾಡಿದಾಗ ಪ್ರವಾಸ ಭತ್ಯೆ ಹಾಗೂ ದಿನ ಭತ್ಯೆಯನ್ನು ಚಾಲ್ತಿಯಲ್ಲಿರುವ ಸರ್ಕಾರಿ ಆದೇಶದಂತೆ ನಿಯಂತ್ರಿಸುವುದು. ಇದಲ್ಲದೆ ಸಭೆಗಳಲ್ಲಿ ಭಾಗವಹಿಸಿದ/ಪರಿವೀಕ್ಷಣೆಯ ಸಂದರ್ಭದಲ್ಲಿ ಸಮಿತಿಯ ಅಧ್ಯಕ್ಷರಿಗೆ ಪ್ರತಿ ಬೇಟಿಗೆ ರೂ. 9000/– (ಒಂಬತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಸಮಿತಿಯ ಅಧಿಕಾರೇತರ ಸದಸ್ಯರಿಗೆ ಪ್ರತಿ ಭೇಟಿಗೆ ರೂ. 6500/– (ಆರು ಸಾವಿರದ ಐನೂರು ರೂಪಾಯಿಗಳು) ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಹಾಗೂ ಸಮಿತಿಯ ಅಧಿಕಾರೇತರ

ಸದಸ್ಯರು/ಸಲಹೆಗಾರರು ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳ ಪರಿವೀಕ್ಷಣೆ ಸಂದರ್ಭದಲ್ಲಿ ರೂ. 6500/–ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ. ಮುಂದುವರೆಯುತ್ತ, ಸಮಿತಿಯು ಪರಿವೀಕ್ಷಣೆ ಮಾಡದ ಸಂದರ್ಭಗಳಲ್ಲಿ ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳು ನಡೆಸುವ ಪರಿವೀಕ್ಷಣೆಯ ವರದಿಗಳನ್ನು ಪರಿಶೀಲಿಸಿ ಅಂತಿಮಗೊಳಿಸಲು ಸಮಿತಿ ಅಧ್ಯಕ್ಷರು ಪ್ರತಿ ಅಣೆಕಟ್ಟಿಗೆ ರೂ. 5000/– ರನ್ನು ಪಡೆಯುತ್ತಾರೆ, ಮತ್ತು ಸಮಿತಿಯು ಪರಿವೀಕ್ಷಣೆ ಮಾಡದ ಸಂದರ್ಭಗಳಲ್ಲಿ ಅಣೆಕಟ್ಟು ಸುರಕ್ಷತಾ ಪರಿಶೀಲನಾ ತಂಡಗಳು ನಡೆಸುವ ಪರಿವೀಕ್ಷಣೆಯ ವರದಿಯನ್ನು ಪರಿಶೀಲಿಸಿ ಅಂತಿಮಗೊಳಿಸಲು ಸಮಿತಿಯ ಅಧಿಕಾರೇತರ ಸದಸ್ಯರು ಪ್ರತಿ ವರದಿಗೆ ರೂ. 4500/–ಗಳಂತೆ ಸಭಾ ಭತ್ಯೆಯನ್ನು ಪಡೆಯುತ್ತಾರೆ.

ಈ ಮೇಲಿನ ಆದೇಶವನ್ನು ಆರ್ಥಿಕ ಇಲಾಖೆಯು No. PWD/286/Finance Cell-1/13, dated : 03–08–13 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಈ ಮೇಲಿನ ಆದೇಶವು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರದೀಪ್ ಮಿತ್ರ ಮಂಜುನಾಥ್**

ಸರ್ಕಾರದ ಉಪ ಕಾರ್ಯದರ್ಶಿ (ಕೃಭಾಜನಿ),

ಜಲಸಂಪನ್ಮೂಲ ಇಲಾಖೆ.

## WATER RESOURCES SECRETARIAT

**SUB :** Refixation of fee payable to Chairman for scrutinizing Inspection Reports- Reg.

**READ :** 1) Govt. Order No WRD 10 DSP 2011, Bangalore, Dated: 27-04-2012.

2) Ltr from SE, M & E, B'lore No. SE/M&E/DSRP/AE-I/AEE-3/12-13/773 dt 22-2-13.

**PREAMBLE :**

As per the report published on Dam Safety proceedings published by the Central Water Commission, the States have to constitute a standing panel of experts for safety review of all dams which are more than 15 mtrs in height or which store 60 $MM^3$ or more of water, once in 10 (ten) years. The existing G.O on Dam Safety Review Panel (DSRP) dt 23-01-2007 was modified vide Government Order read at (1) above, with "Sri A.K. Bajaj, Former Chairman, Central Water Commission as Chairman. Based on a request by the Chairman, the Superintending Engineer, M & E vide (2) above, has submitted proposals for refixation of the honorarium payable to the Chairman of DSRP for scrutinizing and finalizing the Inspection Reports in instances where the Chairman does not participate in Inspections and the Inspection programs are conducted by the Dam Safety Review Teams.

The proposal has been examined by Government and following orders are issued.

### G.O.No: WRD 1 DSP 2012, BANGALORE, DATED: 11-08-2013/11-09-2013

The DSRP reconstituted vide Govt. Order o. WRD 10 DSP 2011, Bangalore, dated: 27-04-2012 for safety review of all dams in the State which are more than 15 Mtrs. in height or which store more than 60 $MM^3$ of water, now stands modified as follows:-

d) Whenever the panel members travel from their Headquarters for inspection, the Travelling Allowance and Daily Allowance shall be regulated as per prevalent Government Order. Apart from this, the Chairman is also entitled for sitting fee at Rs. 9000/- (Rupees Nine thousand only) and the Non-official Members are entitled for sitting fee of Rs. 6500/- (Rupees six thousand five hundred only) per visit for participating in meetings/inspections. During inspections by the Dam safety Review Teams, the Non-official- members/advisors of the committee are entitled for a sitting fee of Rs. 6500/- for participation. Further, the DSRP Chairman is entitled for fee of Rs. 6500/-and the Non-Official members are entitled for a sitting fee of~ 4500/- for scrutinizing and finalizing the Inspection Reports, in instances where they themselves do not participate in Inspections and the Inspection programs are conducted by the Dam Safety Review Teams.

**In place of d) above, the following may be read.**

d) Whenever the panel members travel from their Headquarters for inspection, the Travelling Allowance and Daily Allowance shall be regulated as per prevalent Government Order. Apart from this, the Chairman is also entitled for sitting fee at Rs. 9000/- (Rupees Nine thousand only) and the Non-official Members are entitled for sitting fee of Rs. 6500/- (Rupees six thousand five hundred only) per visit for participating in meetings/inspections. During inspections by the Dam safety Review Teams, the Non-official member advisors of the committee are entitled for a sitting fee of Rs. 6500/- for participation. Further the DSRP Chairman is entitled for fee of Rs. 5000/- per Dam for scrutinizing and finalizing the Inspection Reports, in instances where he himself does not participate in Inspections and the Inspection programs are conducted by the Dam Safety Review Teams. The Non-Official members are entitled for a sitting fee of Rs. 4500 - for scrutinizing and finalizing each Inspection Reports, in instances where they themselves do not participate in Inspections and the Inspection programs are conducted by the Dam Safety Review Teams.

The above order is issued vide concurrence of Finance Department obtained vide. No. PWD/286lFinance Cell-1/13 Dt: 03-08-13.

The above order shall remain in force until further orders.

By Order and in the name of the Governor of Karnataka,

PR. 1203

**Pradeep Mitra Manjunath**

Deputy Secretary to Government (KBJN)

Water Resources Department.

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ** : 2013–14ನೇ ಸಾಲಿನಲ್ಲಿ, ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಯರಿಗಾಗಿ ಜಿಲ್ಲೆಗೆ ಒಂದರಂತೆ 100 ಸಂಖ್ಯಾಬಲದ 30 ಹೊಸ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :** ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರ ಏಕ ಕಡತ ಸಂಖ್ಯೆ : ಹಿಂವಕಇ/ವನಿಶಾ–2/ ಸಿಆರ್–55/2013–14, ದಿನಾಂಕ : 24–07–2013.

**ಪ್ರಸ್ತಾವನೆ :**

ರಾಜ್ಯದ ಅನೇಕ ನರ್ಸಿಂಗ್ ಶಾಲೆ/ಕಾಲೇಜುಗಳಲ್ಲಿ, ಹಿಂದುಳಿದ ವರ್ಗಗಳ ಬಡ ಕುಟುಂಬಗಳಿಗೆ ಸೇರಿದ ಅನೇಕ ಪುರುಷ/ಮಹಿಳೆಯರು ವ್ಯಾಸಂಗ ಮಾಡುತ್ತಿದ್ದು, ಇವರಲ್ಲಿ ಕೆಲವರಿಗೆ ಮಾತ್ರ ಹಾಲಿ ಇರುವ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಲ್ಲಿ ಪ್ರವೇಶವನ್ನು, ಇತರೆ ಕೋರ್ಸುಗಳ ವಿದ್ಯಾರ್ಥಿಗಳ ಜೊತೆಗೆ ಕಲ್ಪಿಸಲಾಗಿದೆ. ಇದರಿಂದ ಅವರು ಅಧ್ಯಯನ ಮಾಡಲು ಉತ್ತಮ ಪರಿಸರ ದೊರೆಯುತ್ತಿಲ್ಲ. ವಿದ್ಯಾರ್ಥಿನಿಲಯಗಳ ಪ್ರವೇಶಕ್ಕಾಗಿ, ನರ್ಸಿಂಗ್ ವಿದ್ಯಾರ್ಥಿನಿಯರಿಂದ ಅತ್ಯಂತ ಹೆಚ್ಚಿನ ಬೇಡಿಕೆ ಇರುತ್ತದೆ. ಈ ಕಾರಣಕ್ಕಾಗಿ ಇವರಿಗೆ ಪ್ರತ್ಯೇಕವಾಗಿ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಿ, ಇವರಿಗೆ ವಿಶೇಷವಾದ ಸೌಲಭ್ಯಗಳನ್ನು (ಗ್ರಂಥಾಲಯ, ಕಂಪ್ಯೂಟರ್, ಡ್ರಾಯಿಂಗ್ ಟೇಬಲ್ ಇತ್ಯಾದಿ) ಒದಗಿಸುವ ಅಗತ್ಯವಿರುತ್ತದೆ.

ದಿನಾಂಕ : 12–07–2013ರಂದು ಮಂಡಿಸಿದ 2013–14ನೇ ಸಾಲಿನ ಆಯವ್ಯಯ ಭಾಷಣದಲ್ಲಿ "ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಯರಿಗಾಗಿ ಪ್ರತಿ ಜಿಲ್ಲೆಯಲ್ಲೂ 100 ಸಂಖ್ಯಾಬಲದ ಒಂದು ವಿದ್ಯಾರ್ಥಿನಿಲಯವನ್ನು ಆರಂಭಿಸಲಾಗುವುದು" ಎಂದು ಘೋಷಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಆಯುಕ್ತರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಇವರು 100 ಸಂಖ್ಯಾಬಲದ 30 ಹೊಸ ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಲು ಹಾಗೂ ಈ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡುವ ಸ್ಥಳಗಳನ್ನು ಸೂಚಿಸಿ, ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಹಿಂವಕ 488 ಬಿಎಂಎಸ್ 2013, ಬೆಂಗಳೂರು, ದಿನಾಂಕ : 22–10–2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ 2013–14ನೇ ಸಾಲಿನಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ–1ರಲ್ಲಿ ತಿಳಿಸಿರುವ ಸ್ಥಳಗಳಲ್ಲಿ 28 ಹೊಸ ಮಹಿಳಾ ನರ್ಸಿಂಗ್ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳೊಂದಿಗೆ ಹಾಗೂ ಬೆಂಗಳೂರು ಗ್ರಾಮಾಂತರ ಹಾಗೂ ರಾಮನಗರ ಜಿಲ್ಲೆಗಳಲ್ಲಿ ಬೇಡಿಕೆ ಇಲ್ಲದ ಕಾರಣ ಹಾಗೂ ಬೆಂಗಳೂರು ನಗರ ಜಿಲ್ಲೆಯಲ್ಲಿ ಹೆಚ್ಚಿನ ಬೇಡಿಕೆ ಇರುವ ಕಾರಣ, ಬೆಂಗಳೂರು ನಗರ ಜಿಲ್ಲೆಗೆ ಹೆಚ್ಚುವರಿಯಾಗಿ 2 ವಿದ್ಯಾರ್ಥಿನಿಲಯಗಳನ್ನು ಒಟ್ಟು 30 ಹೊಸ ಮಹಿಳಾ ನರ್ಸಿಂಗ್ ಮೆಟ್ರಿಕ್–ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿ, ಪ್ರತಿ ವಿದ್ಯಾರ್ಥಿನಿಲಯಕ್ಕೆ ವಿವಿಧ ಹುದ್ದೆಗಳನ್ನು ಅನುಬಂಧ–2 ರಲ್ಲಿದ್ದಂತೆ ಮಂಜೂರು ಮಾಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ರಾಜ್ಯವಲಯ ಯೋಜನೆ ಲೆಕ್ಕಶೀರ್ಷಿಕೆ 2225–03–277–2–53ರ "ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗಾಗಿ ಹೊಸ ವಿದ್ಯಾರ್ಥಿನಿಲಯಗಳ ಪ್ರಾರಂಭ ಮತ್ತು ನಿರ್ವಹಣೆ" ಇದರಡಿ ಲಭ್ಯವಿರುವ ಅನುದಾನದ ಮಿತಿಯಲ್ಲಿಯೇ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 659 ವೆಚ್ಚ–3/2013, ದಿನಾಂಕ : 05–10–2013 ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಬಿ. ರಘುನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ : ಹಿಂವಕ 488 ಬಿಎಂಎಸ್ 2013, ಬೆಂಗಳೂರು, ದಿನಾಂಕ : 31–10–2013**

ಅನುಬಂಧ–1

2013–14ನೇ ಸಾಲಿನಲ್ಲಿ, 100 ಸಂಖ್ಯಾಬಲದ 30 ಹೊಸ ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಲಯಗಳನ್ನು ಮಂಜೂರು ಮಾಡಿರುವ ಸ್ಥಳಗಳ ವಿವರ

| ಕ್ರ. ಸಂ. | ಜಿಲ್ಲೆ | ವಿದ್ಯಾರ್ಥಿನಿಲಯಗಳ ಸ್ಥಳ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|
| 1. | ಬೆಂಗಳೂರು ನಗರ | ಅ)ವಿಜಯನಗರ, ಬೆಂಗಳೂರು ಉತ್ತರ ತಾಲ್ಲೂಕು<br>ಆ) ಬೆಂಗಳೂರು ದಕ್ಷಿಣ ತಾಲ್ಲೂಕು | 100 |
| 2. | ಚಿತ್ರದುರ್ಗ | ಚಿತ್ರದುರ್ಗ ಟೌನ್ | 100 |
| 3. | ದಾವಣಗೆರೆ | ದಾವಣಗೆರೆ ಟೌನ್ | 100 |
| 4. | ಚಿಕ್ಕಬಳ್ಳಾಪುರ ಟೌನ್ | ಚಿಕ್ಕಬಳ್ಳಾಪುರ ಟೌನ್ | 100 |
| 5. | ತುಮಕೂರು | ತುಮಕೂರು ಟೌನ್ | 100 |
| 6. | ಕೋಲಾರ | ಕೋಲಾರ ಟೌನ್ | 100 |

| ಕ್ರ. ಸಂ. | ಜಿಲ್ಲೆ | ವಿದ್ಯಾರ್ಥಿನಿಲಯಗಳ ಸ್ಥಳ | ವಿದ್ಯಾರ್ಥಿಗಳ ಸಂಖ್ಯಾಬಲ |
|---|---|---|---|
| 7. | ಶಿವಮೊಗ್ಗ | ಶಿವಮೊಗ್ಗ ಟೌನ್ | 100 |
| 8. | ಮೈಸೂರು | ಮೈಸೂರು ಟೌನ್ | 100 |
| 9. | ಮಂಡ್ಯ | ಮಂಡ್ಯ ಟೌನ್ | 100 |
| 10. | ಚಾಮರಾಜನಗರ | ಚಾಮರಾಜನಗರ ಟೌನ್ | 100 |
| 11. | ದಕ್ಷಿಣ ಕನ್ನಡ | ಮಂಗಳೂರು ಟೌನ್ | 100 |
| 12. | ಕೊಡಗು | ಕುಶಾಲನಗರ, ಸೋಮವಾರಲಪೇಟೆ ತಾಲ್ಲೂಕು | 100 |
| 13. | ಹಾಸನ | ಹಾಸನ ಟೌನ್ | 100 |
| 14. | ಉಡುಪಿ | ಉಡುಪಿ ಟೌನ್ | 100 |
| 15. | ಚಿಕ್ಕಮಗಳೂರು | ಚಿಕ್ಕಮಗಳೂರು ಟೌನ್ (ನರಿಗುಡ್ಡೇನಹಳ್ಳಿ) | 100 |
| 16. | ಬೆಳಗಾಂ | ಬೆಳಗಾಂ ಟೌನ್ | 100 |
| 17. | ಬಿಜಾಪುರ | ಬಿಜಾಪುರ ಟೌನ್ | 100 |
| 18. | ಬಾಗಲಕೋಟೆ | ಬಾಗಲಕೋಟೆ ಟೌನ್ | 100 |
| 19. | ಗದಗ್ | ಗದಗ್ ಟೌನ್ | 100 |
| 20. | ಹಾವೇರಿ | ಹಾವೇರಿ ಟೌನ್ | 100 |
| 21. | ಧಾರವಾಡ | ಧಾರವಾಡ ಟೌನ್ | 100 |
| 22. | ಉತ್ತರ ಕನ್ನಡ | ದಾಂಡೇಲೆ ನಗರ, ಹಳಿಯಾಳ ತಾಲ್ಲೂಕು | 100 |
| 23. | ಗುಲ್ಬರ್ಗಾ | ಗುಲ್ಬರ್ಗಾ ಟೌನ್ | 100 |
| 24. | ಕೊಪ್ಪಳ | ಗಂಗಾವತಿ ಟೌನ್ | 100 |
| 25. | ಯಾದಗಿರಿ | ಯಾದಗಿರಿ ಟೌನ್ | 100 |
| 26. | ಬಳ್ಳಾರಿ | ಬಳ್ಳಾರಿ ಟೌನ್ | 100 |
| 27. | ರಾಯಚೂರು | ರಾಯಚೂರು ಟೌನ್ | 100 |
| 28. | ಬೀದರ್ | ಬೀದರ್ ಟೌನ್ | 100 |

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ : ಹಿಂವಕ 488 ಬಿಎಂಎಸ್ 2013, ಬೆಂಗಳೂರು, ದಿನಾಂಕ : 31–10–2013ಕ್ಕೆ**

**ಅನುಬಂಧ–2**

| ಕ್ರ. ಸಂ. | ವಿವರ | ವೇತನ ಶ್ರೇಣಿ (ರೂ.) | ಒಂದು ವಿದ್ಯಾರ್ಥಿನಿಲಯಕ್ಕೆ ಮಂಜೂರು ಮಾಡಿದ ಹುದ್ದೆಗಳ ಸಂಖ್ಯೆ |
|---|---|---|---|
| 1. | ನಿಲಯ ಮೇಲ್ವಿಚಾರಕರು | 14550–26700 | 1 |
| 2. | ಅಡುಗೆಯವರು | 10400–16400 | 3 |
| 3. | ಅಡುಗೆ ಸಹಾಯಕರು | 9600–14550 | 2 |
| 4. | ರಾತ್ರಿ ಕಾವಲುಗಾರರು (ಮಹಿಳಾ ವಿದ್ಯಾರ್ಥಿನಿಲಯಗಳಿಗೆ ಮಾತ್ರ) | 9600–14550 | 1 |
| | | **ಒಟ್ಟು** | **7** |

**ಹೆಚ್.ಬಿ. ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

**PR. 1246**
**SC-100**

## FINANCE SECRETARIAT

## PROCEEDINGS OF THE GOVERNMENT OF KARNATAKA

**SUB:** Dearness Allowance to Teaching Staff on UGC/AICTE/ICAR scales of pay and Judicial Officers/Pensioners on NJPC pay scales-Revision of rates.

**READ :** (1) G.O.No FD 10 SRP 2013, dated: 20-05-2013.
(2) G.O.No FD 12 SRP 2013 (II), dated: 12-06-2013.

**GOVERNMENT ORDER NO.FD 22 SRP 2013,**

**BANGALORE DATED 10TH OCTOBER 2013**

Government are pleased to sanction increase in the rates of Dearness Allowance to Teaching Staff who are on UGC/AICTE/ICAR scales of pay and to Judicial Officers/Pensioners on NJPC pay scales from the existing **80%** to **90%** of the basic pay with effect from **1st July 2013.**

2. For the purpose of this order, the term 'Basic Pay' means, the pay drawn by a Government employee in the UGC/AICTE/ICAR and NJPC scales of pay applicable to the post held by him.

3. Basic Pay shall not include any other emoluments.

4. Government are also pleased to sanction increase in the rates of Dearness Allowance to NJPC Pensioners/ Family Pensioners from the existing **80%** to **90%** of the basic pension/family pension with effect from **1st July 2013.**

5. The increase in Dearness Allowance admissible under this order is payable in cash until further orders.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a distinct element of remuneration and will not be treated as pay for any purpose.

By Order and in the name of the Governor of Karnataka,

**SUNDARARAJA GUPTHA**

Joint Secretary to Government,

Finance Department (Services-2).

## ಆರ್ಥಿಕ ಸಚಿವಾಲಯ

**ವಿಷಯ :** **ಯುಜಿಸಿ/ಐಸಿಎಆರ್/ಎಐಸಿಟಿಇ** ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು **ಎನ್‌ಜೆಪಿಸಿ** ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/ನಿವೃತ್ತಿ ವೇತನದಾರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1. ಸ.ಆ. ಸಂಖ್ಯೆ : ಎಫ್‌ಡಿ 10 ಎಸ್‌ಆರ್‌ಪಿ 2013, ದಿನಾಂಕ : 20–05–2013
2. ಸ.ಆ. ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2013 (II) ದಿನಾಂಕ : 12–06–2013

**ಸರ್ಕಾರಿ ಆದೇಶ ಸಂಖ್ಯೆ: ಆಇ 22 ಎಸ್‌ಆರ್‌ಪಿ 2013**

**ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್ 2013**

1. ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ **ಶೇ.80**ರಿಂದ **ಶೇ.90**ಕ್ಕೆ ಹೆಚ್ಚಿಸಿ ದಿನಾಂಕ **1ನೇ ಜುಲೈ 2013**ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ 'ಮೂಲ ವೇತನ' ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

3. ಮೂಲ ವೇತನಕ್ಕೆ ಇನ್ನಾವುದೇ ಉಪಲಬ್ಧಗಳನ್ನು ಸೇರಿಸತಕ್ಕದ್ದಲ್ಲ.

4. ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ **ಶೇ.80**ರಿಂದ **ಶೇ.90**ಕ್ಕೆ ಹೆಚ್ಚಿಸಿ ದಿನಾಂಕ **1ನೇ ಜುಲೈ 2013**ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು

6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುಂದರ ರಾಜ ಗುಪ್ತ**
ಸರ್ಕಾರದ ಜಂಟಿ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2).

**PR. 1229**
**SC-500**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಗಾಣಕಲ್ಲು ಗ್ರಾಮದ ಸ.ನಂ.22ರಲ್ಲಿ 0–04 ಗುಂಟೆ ಕಾಲುದಾರಿ, 0–06 ಗುಂಟೆ ಕಲ್ಲುಮರಟಿ ಒಟ್ಟು 0–10 ಗುಂಟೆ ಬಿ–ಖರಾಬು ಜಮೀನನ್ನು ಶ್ರೀ ಸಿ.ಪ್ರಮೋದ್ S/o ಸಿ.ಗೋಪಾಲನ್‌ರವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಪತ್ರ ಸಂಖ್ಯೆ : ಎಲ್‌ಎನ್‌ಡಿ(ಎಸ್):ಸಿಆರ್279/2009–10 ದಿನಾಂಕ: 25–05–2010.
2. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 153 ಎಲ್‌ಜಿಬಿ 2011 ದಿನಾಂಕ: 08–07–2011.
3. ಪತ್ರ ಸಂಖ್ಯೆ : ಎಲ್‌ಎನ್‌ಡಿ(ಎಸ್):ಸಿಆರ್279/2009–10, ದಿನಾಂಕ: 08–08–2011.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರ ಬರೆಯುತ್ತಾ, ಬೆಂಗಳೂರು ದಕ್ಷಿಣ ತಾಲ್ಲೂಕು, ಗಾಣಕಲ್ಲು ಗ್ರಾಮದ ಸ.ನಂ22ರಲ್ಲಿ 0–04 ಗುಂಟೆ ಕಾಲುದಾರಿ, 0–06 ಕಲ್ಲುಮರಟಿ ಒಟ್ಟು 0–10 ಗುಂಟೆ ಬಿ–ಖರಾಬು ಜಮೀನು ಖರಾಬಿನ ಗುಣಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ ಸದರಿ ಜಮೀನಿನ ಮೇಲೆ ಸಾರ್ವಜನಿಕ ಹಕ್ಕನ್ನು ವಿಹಿತಗೊಳಿಸಿ ಶ್ರೀ ಶ್ರೀಧರನ್ ಬಿನ್ ಪಿ.ಕೆ.ಪಣಿಕರ್‌ರವರಿಗೆ ಮಾರುಕಟ್ಟೆ ಬೆಲೆ ನಿಗಧಿಪಡಿಸಿ ಮಂಜೂರು ಮಾಡುವ ಬಗ್ಗೆ ಆದೇಶ ಕೋರಿದ್ದು, ಸರ್ಕಾರದ ಪೂರ್ವಾನುಮೋದನೆ ಪಡೆದು ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 68(1)ರನ್ವಯ ಪ್ರಕಟಣೆ ಹೊರಡಿಸಿದ್ದು, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ.

ಈ ಹಿನ್ನೆಲೆಯಲ್ಲಿ ಮೇಲೆ ಕ್ರಮಸಂಖ್ಯೆ (2)ರಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ68(5)ರಡಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಸದರಿ ಜಮೀನು ಹಿಡುವಳಿದಾರರ ಜಮೀನಿನ ಮಧ್ಯಭಾಗದಲ್ಲಿ ಇರುವುದರಿಂದ ಸದರಿ 0–10 ಗುಂಟೆ ಬಿ–ಖರಾಬು ಜಮೀನನ್ನು ಅರ್ಜಿದಾರರಿಗೆ ಮಂಜೂರು ಮಾಡುವ ಬಗ್ಗೆ ಜಿಲ್ಲಾಧಿಕಾರಿಗಳು ಮೇಲೆ ಓದಲಾದ (3)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಜಮೀನು ಬಿಬಿಎಂಪಿ ವ್ಯಾಪ್ತಿಯಲ್ಲಿದ್ದು, ಜಮೀನಿನ ಪ್ರಸ್ತುತ ಮಾರುಕಟ್ಟೆ ದರ ರೂ.4.00ಕೋಟಿಗಳಾಗಿರುತ್ತದೆ.

ಶ್ರೀ ಸಿ.ಪ್ರಮೋದ್ ಬಿನ್ ಸಿ.ಗೋಪಾಲ್‌ರವರು ತಮ್ಮ ದಿನಾಂಕ:23–02–2013ರ ಪತ್ರದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಕೂಡ ಸದರಿ ಜಮೀನಿನ ಸುತ್ತಲೂ ಬಡಾವಣೆ ನಿರ್ಮಿಸಿ, ಹೊಸ ರಸ್ತೆಗಳನ್ನು ನಿರ್ಮಿಸಿರುವುದರಿಂದ ಈ ಸರ್ವೆ ನಂಬರಿನಲ್ಲಿ ಯಾವುದೇ ಕಾಲುದಾರಿ ಇರುವುದಿಲ್ಲವೆಂದು ತಿಳಿಸಿ, ಸದರಿ 0–10 ಗುಂಟೆ ಬಿ–ಖರಾಬು ಜಮೀನನ್ನು ಮಾರುಕಟ್ಟೆ ದರ ವಿಧಿಸಿ ತಮಗೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 408 ಎಲ್.ಜಿ.ಬಿ. 2011, ಬೆಂಗಳೂರು, ದಿನಾಂಕ: 12–11–2013.**

ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಗಾಣಕಲ್ಲು ಗ್ರಾಮದ ಸ.ನಂ.22ರಲ್ಲಿ 0–04 ಗುಂಟೆ ಬಂಡಿ ದಾರಿ, 0–06 ಕಲ್ಲುಮರಟಿ ಒಟ್ಟು 0–10 ಗುಂಟೆ ಬಿ–ಖರಾಬು ಜಮೀನನ್ನು ಮಾರುಕಟ್ಟೆ ದರವಾದ ಎಕರೆ ಒಂದಕ್ಕೆ ರೂ.4.00 ಕೋಟಿ ದರವನ್ನು ವಿಧಿಸಿ, ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸುವ ಹಾಗೂ ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೊಳಪಟ್ಟು ಶ್ರೀ ಸಿ.ಪ್ರಮೋದ್ S/o ಸಿ.ಗೋಪಾಲನ್‌ರವರಿಗೆ ಮಂಜೂರು ಮಾಡಿದೆ.

**ಷರತ್ತುಗಳು:**

1. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್‌ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.
2. ಮಂಜೂರಿದಾರರು ಮೂರು ತಿಂಗಳ ಒಳಗೆ ಒಂದೇ ಕಂತಿನಲ್ಲಿ ನಿಗಧಿಪಡಿಸಿರುವ ಮಾರುಕಟ್ಟೆ ದರ ಹಾಗೂ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು.
3. ಷರತ್ತುಗಳ ಉಲ್ಲಂಘನೆ ಪ್ರಕರಣಗಳಲ್ಲಿ ಮಂಜೂರಾತಿ ಆದೇಶವು ತನ್ನಷ್ಟಕ್ಕೆ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಉಮಾದೇವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಂಜೂರಾತಿ–1).

**PR. 1261**
**SC-100**

## ಕಂದಾಯ ಸಚಿವಾಲಯ

**ವಿಷಯ** : ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಕುಂದಲಹಳ್ಳಿ ಗ್ರಾಮದ ಸ.ನಂ.13ರ ಜಮೀನುಗಳಲ್ಲಿರುವ 0–21 ಗುಂಟೆ ಬಿ–ಖರಾಬು ಜಮೀನನ್ನು ಸದರಿ ಜಮೀನಿಗೆ ಹೊಂದಿಕೊಂಡಿರುವ ಜಮೀನಿನ ಖಾತೆದಾರರಾದ ಶ್ರೀ ಸೂರ್ಯಪ್ರಕಾಶ್ ಮತ್ತು ಶ್ರೀಮತಿ ವಿಜಯಲಕ್ಷ್ಮಿ ಇವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಪತ್ರ ಸಂಖ್ಯೆ : ಎಲ್ಎನ್‌ಡಿ(ಪೂ):ಸಿಆರ್56/2010–11 ದಿನಾಂಕ: 20–05–2011
2. ಪತ್ರ ಸಂಖ್ಯೆ : ಎಲ್ಎನ್‌ಡಿ(ಪೂ):ಸಿಆರ್56/2010–11 ದಿನಾಂಕ: 01–03–2012
3. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 250 ಎಲ್‌ಜಿಬಿ 2012 ದಿನಾಂಕ: 03–05–2012
4. ಪತ್ರ ಸಂಖ್ಯೆ : ಎಲ್ಎನ್‌ಡಿ(ಪೂ):ಸಿಆರ್56/2010–11, ದಿನಾಂಕ: 29–06–2012.

**ಪ್ರಸ್ತಾವನೆ :**

ಜಿಲ್ಲಾಧಿಕಾರಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಕುಂದಲಹಳ್ಳಿ ಗ್ರಾಮದ ಸ.ನಂ.13ರಲ್ಲಿನ 0–21 ಗುಂಟೆ ಬಿ–ಖರಾಬು ಜಮೀನು ಖರಾಬಿನ ಗುಣಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ ಸದರಿ ಜಮೀನಿಗೆ ಹೊಂದಿಕೊಂಡಿರುವ ಜಮೀನಿನ ಖಾತೆದಾರರಾದ ಶ್ರೀಮತಿ ವಿಜಯಲಕ್ಷ್ಮಿ ಹಾಗೂ ಶ್ರೀ ಸೂರ್ಯಪ್ರಕಾಶ್‌ರವರಿಗೆ ಮಂಜೂರು ಮಾಡುವ ಕುರಿತು ಪ್ರಸ್ತಾವನೆ ಸಲ್ಲಿಸಿದ್ದು, ಈ ಬಗ್ಗೆ ಸರ್ಕಾರದ ಪೂರ್ವಾನುಮೋದನೆ ಪಡೆದು ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 68(1)ರನ್ವಯ ಪ್ರಕಟಣೆ ಹೊರಡಿಸಲಾಗಿದ್ದು, ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲವೆಂದು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು ವರದಿ ಸಲ್ಲಿಸಿರುತ್ತಾರೆ

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ68(5)ರಡಿ ಅಧಿಸೂಚನೆ ಹೊರಡಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿ, ಬೆಂಗಳೂರು ಜಿಲ್ಲೆ ರವರು ಸದರಿ ಖರಾಬು ಜಮೀನನ್ನು ಶ್ರೀಮತಿ ವಿಜಯಲಕ್ಷ್ಮಿ ಹಾಗೂ ಶ್ರೀ ಸೂರ್ಯಪ್ರಕಾಶ್‌ರವರಿಗೆ ಮಾರುಕಟ್ಟೆ ದರ ವಿಧಿಸಿ ಮಂಜೂರು ಮಾಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಜಮೀನು ಬಿಬಿಎಂಪಿ ವ್ಯಾಪ್ತಿಯಲ್ಲಿದ್ದು, ಜಮೀನಿನ ಪ್ರಸ್ತುತ ಮಾರುಕಟ್ಟೆ ದರ ಎಕರೆಯೊಂದಕ್ಕೆ ರೂ.4.00ಕೋಟಿಗಳಾಗಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 250 ಎಲ್.ಜಿ.ಬಿ. 2012, ಬೆಂಗಳೂರು, ದಿನಾಂಕ: 12–11–2013.**

ಬೆಂಗಳೂರು ಪೂರ್ವ ತಾಲ್ಲೂಕು, ಕೃಷ್ಣರಾಜಪುರ ಹೋಬಳಿ, ಕುಂದಲಹಳ್ಳಿ ಗ್ರಾಮದ ಸ.ನಂ.13ರ ಜಮೀನುಗಳಲ್ಲಿರುವ 0–21 ಗುಂಟೆ ಬಿ–ಖರಾಬು ಜಮೀನನ್ನು ಮಾರುಕಟ್ಟೆ ದರವಾದ ಎಕರೆ ಒಂದಕ್ಕೆ ರೂ.4.00 ಕೋಟಿ ದರವನ್ನು ವಿಧಿಸಿ, ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸುವ ಹಾಗೂ ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೊಳಪಟ್ಟು ಖಾತೆದಾರರಾದ ಶ್ರೀ ಸೂರ್ಯಪ್ರಕಾಶ್ ಮತ್ತು ಶ್ರೀಮತಿ ವಿಜಯಲಕ್ಷ್ಮಿರವರಿಗೆ ಮಂಜೂರು ಮಾಡಿದೆ.

**ಷರತ್ತುಗಳು:**

1. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಸ್ಕೆಚ್‌ನಂತೆ ಸರ್ವೆ ಮಾಡಿ ಹಸ್ತಾಂತರಿಸತಕ್ಕದ್ದು.
2. ಮಂಜೂರಿದಾರರು ಮೂರು ತಿಂಗಳ ಒಳಗೆ ಒಂದೇ ಕಂತಿನಲ್ಲಿ ನಿಗಧಿಪಡಿಸಿರುವ ಮಾರುಕಟ್ಟೆ ದರ ಹಾಗೂ ಇತರೆ ಶುಲ್ಕಗಳನ್ನು ಪಾವತಿಸತಕ್ಕದ್ದು.
3. ಷರತ್ತುಗಳ ಉಲ್ಲಂಘನೆ ಪ್ರಕರಣಗಳಲ್ಲಿ ಮಂಜೂರಾತಿ ಆದೇಶವು ತನ್ನಷ್ಟಕ್ಕೆ ತಾನೇ ರದ್ದಾಗುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1).

PR. 1264

SC-100

## ಕಂದಾಯ ಸಚಿವಾಲಯ

**ವಿಷಯ** : ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1ರಲ್ಲಿ 0.19 ಗುಂಟೆ ಬಿ–ಖರಾಬು ಜಮೀನನ್ನು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್‌ರವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಪತ್ರ ಸಂಖ್ಯೆ : ಎಲ್ಎನ್‌ಡಿ (ಎ)/ಸಿ.ಆರ್34/2011–12, ದಿನಾಂಕ: 03–01–2012.
2. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 65 ಎಲ್‌ಜಿಬಿ 2012, ದಿನಾಂಕ: 29–03–2012.
3. ಪತ್ರ ಸಂಖ್ಯೆ : ಎಲ್ಎನ್‌ಡಿ (ಎ)/ಸಿ.ಆರ್34/2011–12, ದಿನಾಂಕ: 23–07–2012.
4. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ದಿನಾಂಕ: 17–08–2012.
5. ಪತ್ರ ಸಂಖ್ಯೆ : ಎಲ್ಎನ್‌ಡಿ (ಎ)/ಸಿ.ಆರ್34/2011–12, ದಿನಾಂಕ: 25–09–2012.

6. ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ದಿನಾಂಕ: 21-02-2013.
7. ಪತ್ರ ಸಂಖ್ಯೆ : ಎಲ್‌ಎನ್‌ಡಿ (ಎ)/ಸಿ.ಆರ್34/2011-12, ದಿನಾಂಕ: 06-07-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1ರಲ್ಲಿ 0.19 ಗುಂಟೆ ಬಿ-ಖರಾಬು ಜಮೀನನ್ನು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರು ಸಂಸ್ಥೆಯ ಚಟುವಟಿಕೆಗಳನ್ನು ಅಭಿವೃದ್ಧಿ ಪಡಿಸಲು ಹಾಗೂ ಕನಕಭವನ ಸ್ಥಾಪಿಸುವುದಕ್ಕಾಗಿ ಮಂಜೂರು ಮಾಡುವಂತೆ ಕೋರಿದ್ದು ಸದರಿ ಜಮೀನು ಕುಂಟೆ ಎಂದು ವರ್ಗೀಕರಣವಾಗಿದ್ದು, ಕುಂಟೆಯ ಗುಣಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ, ಸದರಿ ಜಮೀನಿನ ಮೇಲೆ ಸಾರ್ವಜನಿಕ ಹಕ್ಕನ್ನು ವಿಹಿತಗೊಳಿಸಲು ಜಿಲ್ಲಾಧಿಕಾರಿ, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಬಿ-ಖರಾಬು ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 68(1)ರ ಅಡಿಯಲ್ಲಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಸಾರ್ವಜನಿಕ ಪ್ರಕಟಣೆ ಹೊರಡಿಸಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿದೆ. ಅದರಂತೆ ದಿನಾಂಕ: 12-04-2012ರ ರಾಜ್ಯ ಪತ್ರದಲ್ಲಿ ಪ್ರಕಟಣೆ ಹೊರಡಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಪ್ರಕಟಣೆಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ ಎಂದು ಜಿಲ್ಲಾಧಿಕಾರಿಗಳು ತಿಳಿಸಿದ್ದರಿಂದ ಮೇಲೆ ಓದಲಾದ (4)ರಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 68(5)ರಡಿ ಪ್ರಕಟಣೆ ಹೊರಡಿಸಿದ್ದು, ದಿನಾಂಕ:30-08-2012ರ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡಿರುತ್ತದೆ. ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರು ಸದರಿ ಖರಾಬು ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಜಮೀನಿನ ಮಾರ್ಗಸೂಚಿ ದರ ಎಕರೆಯೊಂದಕ್ಕೆ ರೂ. 65ಲಕ್ಷಗಳಾಗಿದ್ದು, ಮಾರುಕಟ್ಟೆ ದರ ರೂ.85ಲಕ್ಷಗಳಾಗಿರುತ್ತದೆಂದು ಜಿಲ್ಲಾಧಿಕಾರಿ, ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರಮಸಂಖ್ಯೆ (6)ರ ಸರ್ಕಾರಿ ಆದೇಶದಲ್ಲಿ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1ರಲ್ಲಿ 0.19 ಗುಂಟೆ ಬಿ-ಖರಾಬು ಜಮೀನನ್ನು ಪ್ರಸಕ್ತ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ.85.00 ಲಕ್ಷಗಳಂತೆ ದರವನ್ನು ವಿಧಿಸಿ ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರಿಗೆ ಮಂಜೂರು ಮಾಡಲಾಗಿತ್ತು.

ಸದರಿ ಸಂಸ್ಥೆಯು ತನ್ನ ದಿನಾಂಕ: 11-02-2013ರ ಮನವಿಯಲ್ಲಿ ಸದರಿ ಜಮೀನನ್ನು ಉಚಿತವಾಗಿ ಮಂಜೂರು ಮಾಡುವಂತೆ ಕೋರಿದ್ದು, ಮೇಲೆ ಓದಲಾದ ಕ್ರಮಸಂಖ್ಯೆ (7)ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು ಬುದ್ಧ ಪ್ರತಿಷ್ಠಾನ ಸಂಸ್ಥೆಗೆ ಮಾರ್ಗಸೂಚಿ ದರದ ಶೇಕಡ 25 ರಷ್ಟನ್ನು ವಿಧಿಸಿ ರಿಯಾಯಿತಿ ದರದಲ್ಲಿ ಮಂಜೂರು ಮಾಡಿರುವಂತೆ ತಮ್ಮ ಟ್ರಸ್ಟ್‌ಗೂ ಮಂಜೂರು ಮಾಡುವಂತೆ ಕನಕ ಸೇವಾ ಟ್ರಸ್ಟ್ ಕೋರಿರುವ ಮನವಿಯನ್ನು ಸರ್ಕಾರಕ್ಕೆ ಕಳುಹಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರಿ ಆದೇಶ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 12-11-2013**

ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1ರಲ್ಲಿ 0.19 ಗುಂಟೆ ಬಿ-ಖರಾಬು ಜಮೀನನ್ನು ಪ್ರಸಕ್ತ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ.85.00 ಲಕ್ಷಗಳಂತೆ ದರವನ್ನು ವಿಧಿಸಿ ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ದಿನಾಂಕ: 21-02-2013ರಲ್ಲಿ ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್‌ಗೆ ಮಂಜೂರು ಮಾಡಲಾಗಿದ್ದ ಆದೇಶವನ್ನು ಮಾರ್ಪಡಿಸಿ, ಇದಕ್ಕೆ ಬದಲಾಗಿ ಪ್ರಸಕ್ತ ಮಾರ್ಗಸೂಚಿ ದರದ ಮೇಲೆ ಶೇಕಡ 25ರಷ್ಟು ದರವನ್ನು ವಿಧಿಸಿ, ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸುವ ಹಾಗೂ ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೊಳಪಟ್ಟು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರಿಗೆ ಮಂಜೂರು ಮಾಡಿದೆ.

**ಷರತ್ತುಗಳು:**

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ-1).

**PR. 1266**

**SC-25**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಸಾರ್ವಜನಿಕ ವಿತರಣಾ ಪದ್ಧತಿಯಡಿಯಲ್ಲಿ ಟಿಎಪಿಸಿಎಂಎಸ್ ಸಗಟು ಮಳಿಗೆಗಳು ಖರೀದಿಸುವ ಅಕ್ಕಿಯ ದರವನ್ನು ಪ್ರತಿ ಕ್ವಿಂಟಾಲ್‌ಗೆ ರೂ. 830/-ರ ದರದಲ್ಲಿ ಖರೀದಿಸುವ-ಬಗ್ಗೆ.

**ಓದಲಾಗಿದೆ :** ಆಯುಕ್ತರ ಪತ್ರ ಸಂಖ್ಯೆ : ಸಿಎಫ್ಎಸ್ : ಪಿಡಿ : 1 : Eco-Cost/2013-14, ದಿನಾಂಕ : 8-10-2013.

**ಪ್ರಸ್ತಾವನೆ :**

ಮೇಲೆ ಓದಲಾದ (1) ಆಯುಕ್ತರ ಪತ್ರದಲ್ಲಿ "ಅನ್ನ ಭಾಗ್ಯ" ಯೋಜನೆಗೆ ಹೆಚ್ಚುವರಿಯಾಗಿ ಅವಶ್ಯವಿರುವ ಅಕ್ಕಿಯನ್ನು ರಾಜ್ಯ ಸರ್ಕಾರವು ವಿವಿಧ ಮೂಲಗಳಿಂದ ಅಂದರೆ NCDEX Spot Exchange Ltd., ಛತ್ತೀಸ್‌ಗಢ್ ರಾಜ್ಯದಿಂದ ಮತ್ತು ಭಾರತ ಆಹಾರ ನಿಗಮದಿಂದ ಎಕನಾಮಿಕ್ ದರದಲ್ಲಿ ಖರೀದಿಯನ್ನು ಮಾಡುತ್ತಿದ್ದು, ರಾಜ್ಯದಲ್ಲಿ ಸಗಟು ನಾಮಿನಿದಾರರಾಗಿ ಕಾರ್ಯ ನಿರ್ವಹಿಸುತ್ತಿರುವ ತಾಲ್ಲೂಕು ಕೃಷಿ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳು (ಟಿಎಪಿಸಿಎಂಎಸ್) ಈ ಹೆಚ್ಚಿನ ದರದಲ್ಲಿ ಖರೀದಿ ಪ್ರಕ್ರಿಯೆಯನ್ನು ನಿರ್ವಹಿಸಲು ತೊಂದರೆಯಾಗುವುದಾಗಿ ಪ್ರಸ್ತಾಪಿಸಿ, ಸದರಿ ಸಹಕಾರ ಸಂಘಗಳು ಎಕನಾಮಿಕ್ ದರದಲ್ಲಿ ಭಾರತ ಆಹಾರ ನಿಗಮದ ಮೂಲಕ ಖರೀದಿ ಮಾಡುವ ಅಕ್ಕಿಗೆ ಪ್ರತಿ ಕ್ವಿಂಟಾಲ್‌ಗೆ ರೂ. 830/- ರ ದರಕ್ಕೆ ಸೀಮಿತಗೊಳಿಸಲು ಹಾಗೂ ಇನ್ನುಳಿದ ಖರೀದಿ ಮೊತ್ತದ ವ್ಯತ್ಯಾಸದ ದರವನ್ನು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು ನೇರವಾಗಿ ಭಾರತ ಆಹಾರ ನಿಗಮಕ್ಕೆ ಪಾವತಿಸಲು ಹಾಗೂ NCDEX Spot Exchange Ltd., ಛತ್ತೀಸ್‌ಗಢ್ ರಾಜ್ಯದ ಮೂಲಕ ಖರೀದಿ ಮಾಡುವ ಅಕ್ಕಿಗೂ ಸಹ ಅದೇ ದರವನ್ನು ಅಂದರೆ ಪ್ರತಿ ಕ್ವಿಂಟಾಲ್‌ಗೆ ರೂ. 830/-ಕ್ಕೆ ನಿಗಧಿಪಡಿಸಿ ತಾಲ್ಲೂಕು ಕೃಷಿ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳು ಖರೀದಿಯನ್ನು ಮಾಡಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ. ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 21 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ : 17-10-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಸಗಟು ನಾಮಿನಿದಾರರಾಗಿ ಕಾರ್ಯನಿರ್ವಹಿಸುತ್ತಿರುವ ತಾಲ್ಲೂಕು ಕೃಷಿ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳು (ಟಿಎಪಿಸಿಎಂಎಸ್) ಭಾರತ ಆಹಾರ ನಿಗಮದ ಮೂಲಕ ಖರೀದಿಸುವ ಎಕನಾಮಿಕ್ ದರ NCDEX Spot Exchange Ltd. ಮತ್ತು ಛತ್ತೀಸ್‌ಗಢ್ ರಾಜ್ಯದ ಮೂಲಕ ಖರೀದಿ ಮಾಡುವ ಅಕ್ಕಿಗೆ ಪ್ರತಿ ಕ್ವಿಂಟಾಲ್‌ಗೆ ರೂ. 830/-ರಂತೆ ಪಾವತಿಸಿ ಖರೀದಿ ಮಾಡಲು ಹಾಗೂ ಖರೀದಿ ಮೊತ್ತದ ವ್ಯತ್ಯಾಸದ ದರವನ್ನು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು ನೇರವಾಗಿ ಭಾರತ ಆಹಾರ ನಿಗಮಕ್ಕೆ ಪಾವತಿಸಲು ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ಖರೀದಿ ವ್ಯತ್ಯಾಸದ ಮೊತ್ತವನ್ನು ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ 2013-14ರ ಆಯವ್ಯಯದಲ್ಲಿ ಆಹಾರ ಇಲಾಖೆಗೆ ಒದಗಿಸಲಾಗಿರುವ ಅನುದಾನದ ಲೆಕ್ಕ ಶೀರ್ಷಿಕೆ 2408-01-102-0-01-106 (ಯೋಜನೇತರ) ಸಹಾಯಧನದ ಮೊತ್ತದ ಮೂಲಕ ಮರು ಪಾವತಿಯನ್ನು ಪಡೆಯಲು ಅನುಮತಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು

ಗ್ರಾಹಕರ ವ್ಯವಹಾರಗಳ ಇಲಾಖೆ.

**PR. 19**

**SC-200**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಪ್ರಾದೇಶಿಕ ನಿರ್ದೇಶಕರು (ಪರಿಸರ) ಮಂಗಳೂರು, ಉಡುಪಿ ಮತ್ತು ಕಾರವಾರ ಕಛೇರಿಗಳ ಅಧಿಕಾರಿ/ಸಿಬ್ಬಂದಿಗಳ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 117 ಇಪಿಸಿ 2011, ದಿನಾಂಕ : 01-08-2012.
2. ಪ್ರಾದೇಶಿಕ ನಿರ್ದೇಶಕರು (ಪರಿಸರ) ಮಂಗಳೂರು ಇವರ ಪತ್ರ ಸಂಖ್ಯೆ : ಸಿಆರ್‌ಝಡ್. ಸಿಬ್ಬಂದಿ 5/ 2013-14 ದಿನಾಂಕ : 24-08-2013.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಾದೇಶಿಕ ನಿರ್ದೇಶಕರು (ಪರಿಸರ) ಬೆಳಗಾಂ, ಬಳ್ಳಾರಿ, ಗುಲ್ಬರ್ಗಾ ಹಾಗೂ ಮಂಗಳೂರು, ಉಡುಪಿ, ಕಾರವಾರ ಕಛೇರಿಗಳಲ್ಲಿ ಕಾರ್ಯನಿರ್ವಹಿಸುತ್ತಿರುವ 39 ಅಧಿಕಾರಿ/ಸಿಬ್ಬಂದಿಗಳ ಹುದ್ದೆಗಳಲ್ಲಿ 18 ಅಧಿಕಾರಿ ಹುದ್ದೆಗಳ ಸಿಬ್ಬಂದಿಗಳನ್ನು ಖಾಯಂಗೊಳಿಸಲು ಆದೇಶಿಸಲಾಗಿತ್ತು. ಉಳಿದ 21 ತಾತ್ಕಾಲಿಕ ಹುದ್ದೆಗಳನ್ನು ರದ್ದುಪಡಿಸಿ, ಸೃಜನೆಯಲ್ಲದ ಸದರಿ ಹುದ್ದೆಗಳಿಗೆ ಬಾಹ್ಯ ಮೂಲದಿಂದ ನೇಮಕ ಮಾಡಿಕೊಳ್ಳುವಂತೆ ಆದೇಶಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಪ್ರಾದೇಶಿಕ ನಿರ್ದೇಶಕರು (ಪರಿಸರ) ಮಂಗಳೂರು, ಕಾರವಾರ ಮತ್ತು ಉಡುಪಿ ಇವರು ಪ್ರಾದೇಶಿಕ ನಿರ್ದೇಶಕರ ಕಛೇರಿಗಳಲ್ಲಿ ಪ್ರಥಮ ದರ್ಜೆ ಸಹಾಯಕ ಹಾಗೂ ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳೆರಡನ್ನೂ ರದ್ದುಗೊಳಿಸಿರುವುದರಿಂದ ಕಛೇರಿ ಕಡತಗಳು ಹಾಗೂ ಉಪಕರಣಗಳ ಉಸ್ತುವಾರಿಯನ್ನು ಬಾಹ್ಯ ಮೂಲದ ಸಿಬ್ಬಂದಿಗಳಿಗೆ ನೀಡಬೇಕಾಗುತ್ತದೆ. ನ್ಯಾಯಾಲಯದ ಪ್ರಕರಣಗಳಂತಹ ಕೆಲಸಗಳನ್ನು ಜವಾಬ್ದಾರಿಯುತವಾಗಿ ಕಾರ್ಯನಿರ್ವಹಿಸಲು ಮತ್ತು ಅಧಿಕಾರಿಗಳ ಅನುಪಸ್ಥಿತಿಯಲ್ಲಿ ಸಾರ್ವಜನಿಕರಿಗೆ ಸಮಂಜಸ ಮಾಹಿತಿ ನೀಡಲು ಖಾಯಂ ನೌಕರರ ಅವಶ್ಯಕತೆಯಿರುವುದರಿಂದ ಪ್ರಥಮ ದರ್ಜೆ ಸಹಾಯಕ ಅಥವಾ ದ್ವಿತೀಯ ದರ್ಜೆ ಸಹಾಯಕರಲ್ಲಿ ಒಂದು ಹುದ್ದೆಯನ್ನಾದರೂ ಖಾಯಂ ಆಗಿ ಸೃಜಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಅಪಜೀ 117 ಇಪಿಸಿ 2011, ಬೆಂಗಳೂರು, ದಿನಾಂಕ : 10–09–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾದೇಶಿಕ ನಿರ್ದೇಶಕರು (ಪರಿಸರ), ಮಂಗಳೂರು, ಉಡುಪಿ ಹಾಗೂ ಕಾರವಾರ ಕಛೇರಿಗಳಲ್ಲಿ ತಲಾ ಒಂದರಂತೆ ಮೂರು ದ್ವಿತೀಯ ದರ್ಜೆ ಸಹಾಯಕ ಹುದ್ದೆಗಳನ್ನು ಖಾಯಂ ಆಗಿ ಮಂಜೂರು ಮಾಡಲಾಗಿದೆ. ಸದರಿ ಹುದ್ದೆಗಳನ್ನು ನಿಯೋಜನೆ ಮೇಲೆ ಭರ್ತಿ ಮಾಡತಕ್ಕದ್ದು ಹಾಗೂ ಸದರಿ ನೌಕರರ ವೇತನವನ್ನು ಲೆಕ್ಕಶೀರ್ಷಿಕೆ 3435–60–800–0–03ರ ಉಪ ಲೆಕ್ಕಶೀರ್ಷಿಕೆ 002 ರಡಿಯಲ್ಲಿ ಭರಿಸತಕ್ಕದ್ದು. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 717 ವೆಚ್ಚ–5/2013, ದಿನಾಂಕ : 27–08–2013ರಲ್ಲಿ ಆರ್ಥಿಕ ಇಲಾಖೆಯು ನೀಡಿದ ಸಹಮತಿಯನ್ವಯ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ.ಹೆಚ್. ಅನಸೂಯಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

(ಪರಸರ ಮತ್ತು ಜೀವಿಶಾಸ್ತ್ರ)

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**PR. 24**

**SC-100**

## COMMERCE AND INDUSTRIES SECRETARIAT

**SUB** : Project proposal of M/s Sangamesh Sugars Ltd., to establish a unit for manufacture of "Sugar (White Crystal) Crushing Capacity of 5000 TCD along with a Co-generation Power Plant for 18 MW Capacity and a Ethanol Plant of Capacity of 35 KLPD" at Yaragal B.K. Village, Sindagi-Taluk, Bijapur District - reg.

**REF :** 1) Government Order No. CI 167 SPI 2011, dated: 18.08.2011.

2) Request from M/s Sangamnath Sugars Ltd., dated: 01.10.2013.

**Preamble :**

The project proposal of M/s Sangamesh Sugars Ltd., having its registered office at Satti Road, Athani, Belgaum District to establish a unit for manufacture of "Sugar (White Crystal) Crushing Capacity of 5000 TCD along with a Co-generation Power Plant for 18 MW Capacity and a Ethanol Plant of Capacity of 35 KLPD" at Yaragal B.K. Village, Sindagi Taluk, Bijapur District was approved and Government Order was issued read at (1) above.

In the letter dated 01.10.2013, M/s Sangamnath Sugars Ltd., has requested for transfer of project approval and all clearances of M/s Sangamesh Sugars Ltd., to M/s Sangamnath Sugars Ltd.

The Government has examined the proposal and hence the following Order.

**GOVERNMENT ORDER NO. CI 167 SPI 2011, BANGALORE, DATED: 02.12.2013**

Government is pleased to transfer the approval given to M/s Sangamesh Sugars Ltd., in favour of **"M/s Sangamnath Sugars Ltd.,"** having its registered office at Satti Road, Athani, Belgaum District for implementation of the project approved vide Government Order No. CI 167 SPI 2011, dated: 18.08.2011.

All other terms and conditions indicated in the above Govt. order remain unaltered.

By Order and in the name of the Governor of Karnataka,

**S. UMADEVI**

Desk Officer (Technical Cell)

Commerce & Industries Department

**PR 27**

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ : ಒಇ 225 ಪಿಪಿಇ 2011, ಬೆಂಗಳೂರು, ದಿನಾಂಕ : 13–12–2013.**

ಸರ್ಕಾರದ ಆದೇಶ ಸಂಖ್ಯೆ : ಒಇ 225 ಪಿಪಿಇ 2011, ದಿನಾಂಕ : 28–06–2013ರ ಆದೇಶ ಭಾಗದ ಕ್ರಮ ಸಂಖ್ಯೆ 5ರಲ್ಲಿನ ಅಂಕಣ 4ರಲ್ಲಿ **₹ 7400–200–8800–260–10880–320–13120"** ಎಂಬುದರ ಬದಲಿಗೆ **"₹ 13000–350–14400–400–16800–450–19500–525–22650–600–23850"** ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು. ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

**PR 34**

**ಒಳಾಡಳಿತ ಸಚಿವಾಲಯ**

**ವಿಷಯ :** ಮೈಸೂರಿನ ಪ್ರಧಾನ ಹಿರಿಯ ಸಿ.ಜೆ. ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹಾಗೂ ಅವರ ಕಛೇರಿಗೆ ಪೂರಕ ಸಿಬ್ಬಂದಿಯ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ : ಡಿಪಿಎಸ್/ಸಿಶಾ–1/295/2012–13, ದಿನಾಂಕ : 06/07–02–2013.

**ಪ್ರಸ್ತಾವನೆ :**

ಮೇಲೆ ಓದಲಾದ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ದಿನಾಂಕ : 06/07–02–2013ರ ಪತ್ರದಲ್ಲಿ ಸರ್ಕಾರದ ಆದೇಶ ಸಂ. ಲಾ 84 ಎಲ್‌ಸಿಇ 76(1), ದಿನಾಂಕ : 26–06–1976ರನ್ವಯ ಪ್ರಧಾನ ಹಿರಿಯ ಸಿ.ಜೆ. ಮತ್ತು ಸಿ.ಜೆ.ಎಂ. ನ್ಯಾಯಾಲಯವು ಮೈಸೂರಿನಲ್ಲಿ ಸ್ಥಾಪಿತವಾಗಿ ಕಾರ್ಯನಿರ್ವಹಿಸುತ್ತಿರುತ್ತವೆ. ಆದರೆ, ಸದರಿ ಆದೇಶದ ಪ್ರತಿ ಲಭ್ಯವಿರುವುದಿಲ್ಲ. ಸದರಿ ನ್ಯಾಯಾಲಯದಲ್ಲಿ 25 ಕ್ರಿಮಿನಲ್ ಪ್ರಕರಣಗಳು ಬಾಕಿ ಇದ್ದು ಹಾಗೂ ಇನ್ನೂ ಹೆಚ್ಚಿನ ಪ್ರಕರಣಗಳು ಈ ನ್ಯಾಯಾಲಯಕ್ಕೆ ಸ್ವೀಕೃತವಾಗುವ ನಿರೀಕ್ಷೆ ಇರುತ್ತದೆ. ಆದ್ದರಿಂದ, ನ್ಯಾಯಾಲಯದ ಕಾರ್ಯ ಕಲಾಪಕ್ಕೆ ತೊಂದರೆಯಾಗದಂತೆ ಸರ್ಕಾರ ಪ್ರಕರಣಗಳಲ್ಲಿ ಸರ್ಕಾರವನ್ನು ಪ್ರತಿನಿಧಿಸುವ ಸಲುವಾಗಿ ಮೈಸೂರಿನ ಪ್ರಧಾನ ಹಿರಿಯ ಸಿ.ಜೆ. ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ತಲಾ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಮತ್ತು ಅವರ ಕಛೇರಿಗೆ ಒಂದು ಶೀಘ್ರಲಿಪಿಗಾರರ ಹಾಗೂ ಒಂದು ದಲಾಯತ ಹುದ್ದೆಯನ್ನು ಸೃಜಿಸಲು ಸರ್ಕಾರವನ್ನು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 107 ಪಿಪಿಇ 2013, ಬೆಂಗಳೂರು, ದಿನಾಂಕ : 16ನೇ ಡಿಸೆಂಬರ್ 2013.**

ಪ್ರಸ್ತಾವನೆಯಲ್ಲಿನ ವಿವರಗಳ ಹಿನ್ನೆಲೆಯಲ್ಲಿ, ಮೈಸೂರಿನ ಪ್ರಧಾನ ಹಿರಿಯ ಸಿ.ಜೆ. ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಗೆ ಈ ಕೆಳಕಂಡ ಒಟ್ಟು 02 ಹುದ್ದೆಗಳನ್ನು ಮೊದಲ ಬಾರಿಗೆ ಒಂದು ವರ್ಷದ ಅವಧಿಗೆ ಅಥವಾ ಸದರಿ ನ್ಯಾಯಾಲಯ/ಕಛೇರಿಯು ಅಸ್ತಿತ್ವದಲ್ಲಿರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ತಾತ್ಕಾಲಿಕವಾಗಿ ಸೃಜಿಸಿದೆ.

**ಮೈಸೂರಿನ ಪ್ರಧಾನ ಹಿರಿಯ ಸಿ.ಜೆ. ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸೃಜಿಸಿರುವ ಹುದ್ದೆಗಳ ವಿವರ :**

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆ ಸಂಖ್ಯೆ |
|---|---|---|
| 1. | ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು | 01 |
| 2. | ಶೀಘ್ರಲಿಪಿಗಾರರು | 01 |
| | **ಒಟ್ಟು** | **02** |

ಸದರಿ ಹುದ್ದೆಗಳ ಸೃಜನೆಯಿಂದಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2014–ನ್ಯಾಯಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಇದರಡಿ ಭರಿಸತಕ್ಕದ್ದು.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ. ಆಇ 91 ವೆಚ್ಚ–11/ 2013, ದಿನಾಂಕ : 27–08–2013 ಮತ್ತು ಟಿಪ್ಪಣಿ ಸಂ. ಆಇ 348 ವೆಚ್ಚ–11/2013, ದಿನಾಂಕ : 12–11–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ದೇವೆಂದ್ರಪ್ಪ ಕಟ್ಟಿಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು–ಬಿ)

**PR 40**

## ಪಶುಸಂಗೋಪನೆ ಮತ್ತು ಮೀನುಗಾರಿಕಾ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ : ಪಸಂಮೀ 33 ಮೀಇಸೇ 2012, ಬೆಂಗಳೂರು, ದಿನಾಂಕ : 02-01-2014.**

ಆದೇಶ ಸಂಖ್ಯೆ : ಪಸಂಮೀ/33/ಮೀಇಸೇ/2012, ದಿನಾಂಕ : 24-05-2012ರ ಅನುಬಂಧದ ಕ್ರಮ ಸಂಖ್ಯೆ : 11,12 ಮತ್ತು 22ರ ಬದಲಿಗೆ ಈ ಕೆಳಕಂಡಂತೆ ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.

| ಕ್ರ. ಸಂ. | ಹುದ್ದೆಯ ಹೆಸರು | ಎಲ್ಲಿಂದ | ಸ್ಥಳಾಂತರಿಸಲಾದ ಹುದ್ದೆ | ಸಂ. | ರಾಜ್ಯ/ಜಿಲ್ಲಾ ವಲಯ | ನಿಯಂತ್ರಣಾಧಿಕಾರಿ |
|---|---|---|---|---|---|---|
| 11. | ಮೀನುಗಾರಿಕೆ ವಿಸ್ತರಣಾಧಿಕಾರಿ (ಮೀನುಗಾರಿಕೆ ಸಹಾಯಕ ನಿರ್ದೇಶಕರು, (ಶ್ರೇ-2) | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಶಿವಮೊಗ್ಗ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2), ಮೊಳಕಾಲ್ಮೂರು | 1 | ಜಿಲ್ಲಾ | ಮೀನುಗಾರಿಕೆ ಹಿರಿಯ ಸಹಾಯಕ ನಿರ್ದೇಶಕರು, ಚಿತ್ರದುರ್ಗ |
| 12. | ಮೀನುಗಾರಿಕೆ ವಿಸ್ತರಣಾಧಿಕಾರಿ (ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)) | ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆ, ಬೆಳಗಾವಿ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2), ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1) ಕಛೇರಿ, ಮೀನುಮರಿ ಉತ್ಪಾದನಾ ಕೇಂದ್ರ, ನಾರಾಯಣಪುರ | 1 | ರಾಜ್ಯ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1), ಮೀನುಮರಿ ಉತ್ಪಾದನಾ ಕೇಂದ್ರ, ನಾರಾಯಣಪುರ, ಬಿಜಾಪುರ ಜಿಲ್ಲೆ. |
| 22. | ಮೀನುಗಾರಿಕೆ ವಿಸ್ತರಣಾಧಿಕಾರಿ (ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2)) | ಸೀಗಡಿ ಕೃಷಿಕರ ಅಭಿವೃದ್ಧಿ ಸಂಸ್ಥೆ, ಕಾರವಾರ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-2), ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1) ಕಛೇರಿ, ಕಾರವಾರ. | 1 | ಜಿಲ್ಲಾ | ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇ-1), ಕಾರವಾರ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ಜಯಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

**PR 46**

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಹಾರಂಗಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಜಸಂಇ 10 ಎಂಎಂಹೆಚ್ 2008, ದಿನಾಂಕ : 13-11-2008.
2. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು, ಇವರ ಪತ್ರ ಸಂಖ್ಯೆ : ಕಾನೀನಿನಿ/ತಾಂತ್ರಿಕ-9/74/2012-13, ದಿನಾಂಕ : 05-07-2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಅಧಿಕಾರಿಗಳು ಹಾಗೂ ಅಧಿಕಾರೇತರ ಸದಸ್ಯರನ್ನು ಒಳಗೊಂಡಂತೆ ಹಾರಂಗಿ ಜಲಾಶಯದ ನೀರಾವರಿ ಸಲಹಾ ಸಮಿತಿಯನ್ನು ರಚಿಸಲಾಗಿತ್ತು.

2.ಮೇಲೆ ಓದಲಾದ (2)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು, ಇವರು ವಿಷಯದ ಬಗ್ಗೆ ಪ್ರಸ್ತಾವನೆ ಸಲ್ಲಿಸುತ್ತಾ, ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರಗಳನ್ನು ಒಳಗೊಂಡ ಪಟ್ಟಿಯನ್ನು ಸಲ್ಲಿಸುತ್ತಾ, ಹಾರಂಗಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಜಸಂಇ 106 ಎಂಎಂಕೆ 2013, ಬೆಂಗಳೂರು, ದಿನಾಂಕ : 17-09-2013.**

ಹಾರಂಗಿ ಜಲಾಶಯದ ನೀರಿನ ನಿರ್ವಹಣೆಗಾಗಿ ಅಧಿಕಾರಿ ಸದಸ್ಯರು, ಅಧಿಕಾರೇತರ ಸದಸ್ಯರು, ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು ಹಾಗೂ ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರುಗಳನ್ನು ಒಳಗೊಂಡ ಹಾರಂಗಿ ಜಲಾಶಯ ಯೋಜನೆಯ ನೀರಾವರಿ ಸಲಹಾ ಸಮಿತಿಯನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಮುಂದಿನ ಆದೇಶ ಹೊರಡಿಸುವವರೆಗೆ ಪುನರ್ ರಚಿಸಲಾಗಿದೆ :

**ಅಧ್ಯಕ್ಷರು :–** ಡಾ॥ ಹೆಚ್.ಸಿ. ಮಹದೇವಪ್ಪ, ಮಾನ್ಯ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು ಹಾಗೂ ಕೊಡಗು ಜಿಲ್ಲಾ ಉಸ್ತುವಾರಿ ಸಚಿವರು.

**ಅಧಿಕಾರಿ ಸದಸ್ಯರು :–**

1. ಆಡಳಿತಾಧಿಕಾರಿಗಳು, ಕಾಡಾ, ಕಾವೇರಿ ಜಲಾನಯನ ಯೋಜನೆಗಳು, ಮೈಸೂರು.
2. ಮುಖ್ಯ ಇಂಜಿನಿಯರ್, ಕಾವೇರಿ ನೀರಾವರಿ ನಿಗಮ, ನೀರಾವರಿ (ದಕ್ಷಿಣ), ಮೈಸೂರು.
3. ಜಿಲ್ಲಾಧಿಕಾರಿಗಳು, ಕೊಡಗು ಜಿಲ್ಲೆ, ಮಡಿಕೇರಿ.
4. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ.
5. ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.
6. ಜಂಟಿ ಕೃಷಿ ನಿರ್ದೇಶಕರು, ಕೊಡಗು ವಿಭಾಗ, ಕೊಡಗು.
7. ಸೂಪರಿಂಟೆಂಡಿಂಗ್ ಇಂಜಿನಿಯರ್, ಹಾರಂಗಿ ಯೋಜನಾ ವೃತ್ತ, ಕುಶಾಲನಗರ– ಸದಸ್ಯ ಕಾರ್ಯದರ್ಶಿ.

**ಅಧಿಕಾರೇತರ ಸದಸ್ಯರು :–**

1. ಶ್ರೀ ಅಡಗೂರು ಹೆಚ್. ವಿಶ್ವನಾಥ್, ಮಾನ್ಯ ಲೋಕಸಭಾ ಸದಸ್ಯರು, ಮೈಸೂರು ಮತ್ತು ಕೊಡಗು ಕ್ಷೇತ್ರ.
2. ಶ್ರೀ ಎಂ.ಪಿ. ಅಪ್ಪಚ್ಚು (ರಂಜನ್), ಮಾನ್ಯ ಶಾಸಕರು, ಮಡಿಕೇರಿ ಕ್ಷೇತ್ರ.
3. ಶ್ರೀ ಕೆ. ವೆಂಕಟೇಶ್, ಮಾನ್ಯ ಶಾಸಕರು, ಪಿರಿಯಾಪಟ್ಟಣ ಕ್ಷೇತ್ರ.
4. ಶ್ರೀ ಎ. ಮಂಜು, ಮಾನ್ಯ ಶಾಸಕರು, ಅರಕಲಗೂಡು ಕ್ಷೇತ್ರ.
5. ಶ್ರೀ ಹೆಚ್.ಪಿ. ಮಂಜುನಾಥ್, ಮಾನ್ಯ ಶಾಸಕರು, ಹುಣಸೂರು ಕ್ಷೇತ್ರ.
6. ಶ್ರೀ ಸಾ.ರಾ. ಮಹೇಶ್, ಮಾನ್ಯ ಶಾಸಕರು, ಕೆ.ಆರ್. ನಗರ ಕ್ಷೇತ್ರ.
7. ಅಧ್ಯಕ್ಷರು, ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರ, ಕಾವೇರಿ ಜಲಾನಯನ ಯೋಜನೆಗಳು, ಮೈಸೂರು.
8. ಅಧ್ಯಕ್ಷರು, ಹಾರಂಗಿ ನೀರು ಬಳಕೆದಾರರ ಸಹಕಾರ ಸಂಘಗಳ ಮಹಾಮಂಡಲ, ಕುಶಾಲನಗರ.

**ವಿಶೇಷ ಆಹ್ವಾನಿತ ಅಧಿಕಾರಿ ಸದಸ್ಯರು :–**

1. ಸರ್ಕಾರದ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ, ಬೆಂಗಳೂರು.
2. ಸರ್ಕಾರದ ಕಾರ್ಯದರ್ಶಿಗಳು, ಕಾನೂನು ಇಲಾಖೆ, ಬೆಂಗಳೂರು.
3. ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ ನಿಯಮಿತ, ಬೆಂಗಳೂರು.
4. ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಮೈಸೂರು.
5. ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಹಾಸನ.
6. ಮುಖ್ಯ ಕಾರ್ಯ ನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಕೊಡಗು.
7. ಜಂಟಿ ಕೃಷಿ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು.
8. ಜಂಟಿ ಕೃಷಿ ನಿರ್ದೇಶಕರು, ಹಾಸನ ವಿಭಾಗ, ಹಾಸನ.
9. ಸಹಾಯಕ ನಿಬಂಧಕರು, ಸಹಕಾರ ಇಲಾಖೆ, ಕಾಡಾ, ಮೈಸೂರು.

**ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರು :–**

1. ಶ್ರೀ ಹೆಚ್.ಡಿ. ದೇವೇಗೌಡ, ಮಾಜಿ ಪ್ರಧಾನ ಮಂತ್ರಿಗಳು ಹಾಗೂ ಮಾನ್ಯ ಲೋಕಸಭಾ ಸದಸ್ಯರು, ಹಾಸನ ಕ್ಷೇತ್ರ.
2. ಶ್ರೀ ಎಂ.ಸಿ. ನಾಣಯ್ಯ, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮಡಿಕೇರಿ.
3. ಶ್ರೀ ಟಿ. ಜಾನ್, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮಡಿಕೇರಿ.
4. ಶ್ರೀ ಪಟೇಲ್ ಶಿವರಾಮ್, ಮಾನ್ಯ ವಿಧಾನ ಪರಿಷತ್ ಸದಸ್ಯರು, ಹಾಸನ.
5. ಶ್ರೀ ಕೆ.ವಿ. ನಾರಾಯಣಸ್ವಾಮಿ, ಮಾನ್ಯ ವಿಧಾನ ಪರಿಷತ್ ಸದಸ್ಯರು, ಕೋಣನೂರು.
6. ಶ್ರೀ ಸಂದೇಶ್ ನಾಗರಾಜು, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.
7. ಶ್ರೀ ಗೋ. ಮಧುಸೂದನ್, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.
8. ಶ್ರೀ ಸಿ.ಹೆಚ್. ವಿಜಯಶಂಕರ್, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.
9. ಶ್ರೀ ಮರಿತಿಬ್ಬೇಗೌಡ, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮಂಡ್ಯ.

10. ಶ್ರೀ ಸಿದ್ದರಾಜು, ಮಾನ್ಯ ವಿಧಾನ ಪರಿಷತ್ ಸದಸ್ಯರು, ಮೈಸೂರು.

2. ಸದರಿ ಸಮಿತಿಯನ್ನು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಪುನರ್ ರಚಿಸಲಾಗಿದೆ :

a. The use of Cauvery Water as per the notified order of the Cauvery Water Dispute Tribunal dated : 19-02-2013 is without prejudice to the pending Civil Appeal No. 2453/2007 filed by the State before the Hon'ble Supreme Court ; and

b. Use of Cauvery water is subject to the directions, if any, issued by the Supervisory Committee on Cauvery constituted by the Central Government vide notification dated : 22-05-2013.

3. ಸದರಿ ಸಮಿತಿಯ ಅಧಿಕಾರೇತರ ಸದಸ್ಯರ ಮತ್ತು ವಿಶೇಷ ಆಹ್ವಾನಿತ ಅಧಿಕಾರೇತರ ಸದಸ್ಯರ ಪ್ರವಾಸ ಭತ್ಯೆ ಮತ್ತು ಇತರೆ ಭತ್ಯೆಗಳನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ : 03-02-2001 ರನ್ವಯ ಪಾವತಿ ಮಾಡತಕ್ಕದ್ದು. ಈ ಬಗ್ಗೆ ತಗಲುವ ವೆಚ್ಚವನ್ನು ಕಾವೇರಿ ನೀರಾವರಿ ನಿಗಮ ನಿಯಮಿತದಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್. ವಿಜಯಸಾರಥಿ**
ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ, ಎಂಎಂಐ-3),
ಜಲಸಂಪನ್ಮೂಲ ಇಲಾಖೆ.

**PR 47**

**SC-50**

## ಆರ್ಥಿಕ ಸಚಿವಾಲಯ

**ವಿಷಯ :** ರಾಜ್ಯದಲ್ಲಿನ ಖಜಾನೆ ಕಟ್ಟಡಗಳನ್ನು ದುರಸ್ತಿಗೊಳಿಸುವುದು ಹಾಗೂ ನವೀಕರಿಸುವುದು.

**ಓದಲಾಗಿದೆ :** ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ : ಖನಿ/ಆಶಾ-3/ಖಜಾನೆ-II 35/2013-14, ದಿನಾಂಕ : 09-10-2013.

**ಪ್ರಸ್ತಾವನೆ :**

ಖಜಾನೆ ನಿರ್ದೇಶಕರು ಬೆಂಗಳೂರು ಇವರು ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ರಾಜ್ಯದಲ್ಲಿ ಒಟ್ಟು 216 ಖಜಾನೆ ಕಛೇರಿಗಳಿದ್ದು, ಅವುಗಳಲ್ಲಿ ಕೆಲವು ಹಳೆಯ ಕಂದಾಯ ಕಟ್ಟಡಗಳ ಸಂಕೀರ್ಣದಲ್ಲಿ, ಕೆಲವು ಹೊಸ ಜಿಲ್ಲಾ ಆಡಳಿತ ಭವನಗಳಲ್ಲಿ ಹಾಗೂ ಇನ್ನೂ ಕೆಲವು ಹೊಸ ಮಿನಿವಿಧಾನಸೌಧದ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಇವುಗಳಲ್ಲಿ 19 ಖಜಾನೆ ಕಛೇರಿಗಳು ಖಾಸಗಿ ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿವೆ. ಹಳೆಯ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ (ಸ್ವಂತ ಕಟ್ಟಡಗಳನ್ನು ಸೇರಿ) ಕಟ್ಟಡಗಳು ಬಹಳಷ್ಟು ದುರವಸ್ಥೆಯಲ್ಲಿದ್ದು, ಬಹಳ ಸಮಯದಿಂದಲೂ ಈ ಕಟ್ಟಡಗಳಲ್ಲಿ ಯಾವುದೇ ದುರಸ್ತಿ ಅಥವಾ ನವೀಕರಣ ಕಾರ್ಯವನ್ನು ಕೈಗೊಂಡಿರುವುದಿಲ್ಲ ಎಂದು ಹಳೆಯ ಕಂದಾಯ ಕಟ್ಟಡದಲ್ಲಿ ಹಾಗೂ ಸ್ವಂತ ಇಲಾಖೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಖಜಾನೆ ಕಟ್ಟಡಗಳಲ್ಲಿ ವಿವಿಧ ರೀತಿಯ ದುರಸ್ತಿಗಳು ಅಗತ್ಯವಾಗಿ ಬೇಕಾಗಿರುತ್ತದೆಯೆಂದು ತಿಳಿಸಿರುತ್ತಾರೆ.

ಸರ್ಕಾರವು ರಾಜ್ಯದ ಎಲ್ಲಾ ಹಣಕಾಸಿನ ವಹಿವಾಟುಗಳನ್ನು ಆನ್‌ಲೈನ್ ಇಂಟಿಗ್ರೇಷನ್ ಮೂಲಕ ಒಂದೇ ವೇದಿಕೆಯಡಿ ತರುವ ಮಹಾತ್ವಾಕಾಂಕ್ಷಿ ಯೋಜನೆಯಾದ ಖಜಾನೆ- II ಆವೃತ್ತಿಯನ್ನು ಜಾರಿಗೊಳಿಸಲು ಕ್ರಮ ಕೈಗೊಂಡಿದೆ. ಸರ್ಕಾರದ ಬಹುತೇಕ ಹಣಕಾಸು ವ್ಯವಹಾರಗಳು ಖಜಾನೆಗಳ ಮೂಲಕವೇ ನಡೆಯುವುದರಿಂದ, ರಾಜ್ಯದ ಖಜಾನೆಗಳು, ಖಜಾನೆ- II ಯೋಜನೆಯ ಪ್ರಮುಖ ಘಟಕಗಳಾಗಿವೆ. ಈ ಎಲ್ಲಾ ಖಜಾನೆಗಳಿಗೆ ಹೆಚ್ಚಿನ ಗಣಕಯಂತ್ರಗಳು ಯು.ಪಿ.ಎಸ್.ಗಳು ಪ್ರಿಂಟರ್‌ಗಳು, ಮುಂತಾದವುಗಳನ್ನು ನೀಡಲಾಗುತ್ತದೆ. ಹೊಸ ವ್ಯವಸ್ಥೆಯನ್ನು ಜಾಲ ಆಧಾರಿತ (web based) ವನ್ನಾಗಿಸುವುದರಿಂದ ಲ್ಯಾನ್ (LAN) ವ್ಯವಸ್ಥೆಯು ಸಹ ಯೋಜನೆಯ ಪ್ರಮುಖ ಅಂಶವಾಗಿದೆ. ಆದ್ದರಿಂದ ಖಜಾನೆಯಲ್ಲಿನ ಗಣಕ ಯಂತ್ರ ಹಾಗೂ ಇತರೆ ಪರಿಕರಗಳ ಭದ್ರತೆಯ ದೃಷ್ಟಿಯಿಂದ ಸಹ ಖಜಾನೆ ಕಟ್ಟಡಗಳನ್ನು ದುರಸ್ತಿಗೊಳಿಸಿ ನವೀಕರಿಸಬೇಕಾಗಿರುವ ಕಾರಣಗಳಿಂದಾಗಿ ಖಜಾನೆ- II ಭಾಗವಾಗಿ ಖಜಾನೆಯ ಎಲ್ಲಾ ಕಟ್ಟಡಗಳಲ್ಲಿ ಆದ್ಯತೆ ಮೇರೆಗೆ ಸಿವಿಲ್ ಕಾಮಗಾರಿಗಳು, ವಿದ್ಯುತ್ ವ್ಯವಸ್ಥೆ ಮೇಲ್ದರ್ಜೆಗೇರಿಸುವುದು ಹಾಗೂ ಇತರ ಪರಿಕರಗಳನ್ನು ಆದ್ಯತೆಯ ಮೇಲೆ ಒದಗಿಸುವುದು ಅವಶ್ಯಕವಾಗಿದ್ದು, ಲೋಕೋಪಯೋಗಿ ಇಲಾಖೆ ತಿಳಿಸಿದ ಕಾಮಗಾರಿಗಳಲ್ಲಿ ಅತ್ಯಂತ ಅಗತ್ಯವಾದ ದುರಸ್ತಿ ಹಾಗೂ ನವೀಕರಿಸುವ ಕಾಮಗಾರಿಗಳನ್ನು ಪರಿಗಣಿಸಿ, ರಾಜ್ಯದ ಒಟ್ಟು 216 ಖಜಾನೆ ಕಛೇರಿ ಕಟ್ಟಡಗಳಿಗೆ ಸಂಬಂಧಿಸಿದ ದುರಸ್ತಿ ನವೀಕರಣ ಹಾಗೂ ವಿದ್ಯುತ್ ವ್ಯವಸ್ಥೆ ಮೇಲ್ದರ್ಜೆಗೇರಿಸುವ ಒಟ್ಟು ವೆಚ್ಚವನ್ನು ಕೆಳಕಂಡಂತೆ ರೂ. 36.58 ಕೋಟಿ ಎಂದು ಅಂದಾಜಿಸಲಾಗಿದೆ.

| ಕ್ರ. ಸಂ. | ವೆಚ್ಚದ ವಿವರ | ಮೊತ್ತ (ರೂ. ಕೋಟಿಗಳಲ್ಲಿ) |
|---|---|---|
| 1. | ಸಿವಿಲ್ ಕಾಮಗಾರಿ ವೆಚ್ಚ | 11.95 |
| 2. | ವಿದ್ಯುತ್ ಕಾಮಗಾರಿ ವೆಚ್ಚ | 7.13 |
| 3. | ಪೀಠೋಪಕರಣ ಸರಬರಾಜು ವೆಚ್ಚ | 12.14 |
| 4. | ಬಾಡಿಗೆ ಕಟ್ಟಡಗಳಲ್ಲಿನ ಪೀಠೋಪಕರಣ ಹಾಗೂ ವಿದ್ಯುತ್ ಕಾಮಗಾರಿ ವೆಚ್ಚ | 1.00 |
| 5. | ಯೋಜನಾ ನಿರ್ವಹಣಾ ವೆಚ್ಚ | 0.72 |
| 6. | ಇತರೆ ವೆಚ್ಚ (ದರ ಹೆಚ್ಚಳ, ಟೆಂಡ್ ಪ್ರಿಮೀಯಂ ಇತ್ಯಾದಿ) | 3.64 |
| | **ಒಟ್ಟು** | **36.58** |

ರೂ. 20 ಕೋಟಿಗಳ ವೆಚ್ಚವನ್ನು ಪ್ರಸಕ್ತ ಆರ್ಥಿಕ ವರ್ಷ 2013-14ರಲ್ಲಿ ಭರಿಸಲು ಯೋಜಿಸಿದ್ದು ಈ ವೆಚ್ಚವನ್ನು ಈ ವರ್ಷದ ಆಯವ್ಯಯದಲ್ಲಿ ಖಜಾನೆ ಆಧುನೀಕರಣಕ್ಕೆ ಒದಗಿಸಲಾದ ರೂ. 70 ಕೋಟಿಗಳಲ್ಲಿ ಭರಿಸಲು ಉದ್ದೇಶಿಸಲಾಗಿದೆ. ಇನ್ನುಳಿದ ರೂ. 16.58 ಕೋಟಿ ವೆಚ್ಚವನ್ನು ಮುಂದಿನ ಹಣಕಾಸು ವರ್ಷ 2014-15ರಲ್ಲಿ ಭರಿಸಲು ಉದ್ದೇಶಿಸಲಾಗಿದೆ.

ಖಜಾನೆ ಕಟ್ಟಡಗಳ ದುರಸ್ತಿ/ನವೀಕರಣ/ಮೇಲ್ದರ್ಜೆಗೇರಿಸುವ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಯಿಂದ ವಿಭಾಗೀ ಮಟ್ಟದಲ್ಲಿ ಟೆಂಡರ್ ಮೂಲಕ ನಿರ್ವಹಿಸಲಾಗುವುದೆಂದು ತಿಳಿಸಿ ಖಜಾನೆ ನಿರ್ದೇಶಕರು ಅಂದಾಜು ವೆಚ್ಚ ರೂ. 36.58 ಕೋಟಿಗಳಲ್ಲಿ ಕೈಗೊಳ್ಳಲಾಗುವ ಸದರಿ ಕಾಮಗಾರಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 195 ಆಖಇ 2013, ಬೆಂಗಳೂರು, ದಿನಾಂಕ : 23–11–2013.**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ರಾಜ್ಯದಲ್ಲಿನ ಒಟ್ಟು 216 ಖಜಾನೆ ಕಛೇರಿ ಕಟ್ಟಡಗಳ ದುರಸ್ತಿ ಹಾಗೂ ನವೀಕರಣದ ಕಾಮಗಾರಿಗಳನ್ನು ರೂ. 36.58 ಕೋಟಿ ವೆಚ್ಚದಲ್ಲಿ ಕೈಗೊಳ್ಳುವ ಪ್ರಸ್ತಾವನೆಗೆ ಈ ಮೂಲಕ ಸರ್ಕಾರದ ಆಡಳಿತಾತ್ಮಕ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ : ಸಿಆಸುಇ 419 ಸಿಶಾಸೇ, ದಿನಾಂಕ : 28–10–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**PR 49**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಭವನ, ನವದೆಹಲಿ, ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ದಿನಾಂಕ: 26–09–2012.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ದಿನಾಂಕ : 22–08–2013.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ದಿನಾಂಕ : 02–09–2013.
4. ಅಧಿಕೃತ ಜ್ಞಾಪನ ಸಂಖ್ಯೆ : ಆರ್.ಸಿ.ಕೆ./03/ಎಸ್ಇಎಂ/2012–13, ದಿನಾಂಕ : 06–09–2013.
5. ನಿವಾಸಿ ಆಯುಕ್ತ ಕರ್ನಾಟಕ ಭವನ, ನವದೆಹಲಿ ಇವರ ಪತ್ರ ಸಂಖ್ಯೆ : ಆರ್ಸಿಕೆ/03/ಎಸ್ಇಎಮ್/2012–13, ದಿನಾಂಕ : 11–09–2013 ಮತ್ತು ದಿನಾಂಕ : 13–11–2013.

**ಪ್ರಸ್ತಾವನೆ :**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಸೃಜಿಸಲಾದ ನವದೆಹಲಿಯ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ ದಿನಾಂಕ : 12–07–2013 ರಿಂದ 31–07–2013 ರವರೆಗೆ ಹಾಗೂ ದಿನಾಂಕ : 01–08–2013 ರಿಂದ 31–08–2013 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಸದರಿ ಹಿರಿಯ ಸಹಾಯಕ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಬಿಪಿನ್ ಕುಮಾರ್ ಕರಣ್, ಯು.ಡಿ.ಸಿ. ರವರನ್ನು ಅವರ ಮಾತೃ ಇಲಾಖೆಯಾದ ಭಾರತ ಸರ್ಕಾರದ ಯೋಜನಾ ಆಯೋಗದಲ್ಲಿ, ವರದಿ ಮಾಡಿಕೊಳ್ಳುವಂತೆ ಸೂಚಿಸಿ ದಿನಾಂಕ : 06–09–2013ರ ಪೂರ್ವಾಹ್ನ ಕರ್ನಾಟಕ ಭವನ ನವದೆಹಲಿ, ನಿವಾಸಿ ಆಯುಕ್ತರ ಕಛೇರಿಯ ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ. ಈ ಹಿನ್ನೆಲೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು (ಸಮನ್ವಯ), ಕರ್ನಾಟಕ ಭವನ, ನವದೆಹಲಿ, ಇವರ ಆಪ್ತಶಾಖೆಯ ಸಿಬ್ಬಂದಿಯಾದ ಶ್ರೀ ಬಿಪಿನ್ ಕುಮಾರ್ ಕರಣ್, ಹಿರಿಯ ಸಹಾಯಕರು ಇವರ ಸೇವೆಯನ್ನು ದಿನಾಂಕ : 01–09–2013 ರಿಂದ 05–09–2013 ರವರೆಗೆ ಸಕ್ರಮಗೊಳಿಸಲು ಸರ್ಕಾರದ ಘಟನೋತ್ತರ ಮಂಜೂರಾತಿಯನ್ನು ನೀಡಲು ಮೇಲೆ ಕ್ರಮಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ನಿವಾಸಿ ಆಯುಕ್ತರು, ಕರ್ನಾಟಕ ಭವನ, ನವದೆಹಲಿರವರು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 647 ಸಅಸೇ 2012, ಬೆಂಗಳೂರು, ದಿನಾಂಕ : 02ನೇ ಡಿಸೆಂಬರ್, 2013.**

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಭವನ ನವದೆಹಲಿಯ ನಿವಾಸಿ ಆಯುಕ್ತರ ಕಛೇರಿಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಸಮನ್ವಯ) ಹುದ್ದೆಯ ಪೂರಕ ಸಿಬ್ಬಂದಿ ಹುದ್ದೆಯಾದ ಹಿರಿಯ ಸಹಾಯಕ ಹುದ್ದೆಯನ್ನು ದಿನಾಂಕ : 01–09–2013 ರಿಂದ 05–09–2013 ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 985 ವೆಚ್ಚ–12/2013, ದಿನಾಂಕ : 18–11–2013ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**PR 50**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಯಾದಗಿರಿ ಜಿಲ್ಲೆಗೆ ಏಳು ನೋಟರಿ ಹುದ್ದೆಗಳನ್ನು ತುಂಬುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಲಾ 218 ಎಲ್‌ಸಿಎಲ್ 2010, ದಿನಾಂಕ: 18–06–2012
2. ಸರ್ಕಾರದ ಪತ್ರ ಸಂಖ್ಯೆ ಲಾ 171 ಎಲ್‌ಸಿಎಲ್ 2012, ದಿನಾಂಕ: 17–08–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಯಾದಗಿರಿ ಜಿಲ್ಲೆ, ದಿನಾಂಕ: 05–11–2012
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24–02–2009
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23–07–2013
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 171 ಎಲ್‌ಸಿಎಲ್ 2012, ದಿನಾಂಕ: 11–11–2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ: 18–06–2012ರಲ್ಲಿ ಯಾದಗಿರಿ ಜಿಲ್ಲೆಗೆ ಏಳು ನೋಟರಿ ಹುದ್ದೆಗಳನ್ನು ಸೃಜಿಸಿದ್ದು, ಅದರಂತೆ, ಓದಲಾದ (2)ರ ಸರ್ಕಾರದ ಪತ್ರದಲ್ಲಿ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಯಾದಗಿರಿ ಜಿಲ್ಲೆ ಇವರನ್ನು ದಿನಾಂಕ: 17–08–2012ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ದಿನಾಂಕ: 05–11–2012ರ ಪ್ರಸ್ತಾವನೆಯೊಂದಿಗೆ 56 ಜನರ ಮೆಮೋರಿಯಲ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ: 11–11–2013ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

ಸರ್ಕಾರದ ಆದೇಶ ಸಂಖ್ಯೆ: ಲಾ **171 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ: 16ನೇ ಜನವರಿ, 2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಈ ಕೆಳಕಂಡ ಅರ್ಜಿದಾರರನ್ನು ಯಾದಗಿರಿ ಕಂದಾಯ ತಾಲ್ಲೂಕಿಗೆ ನಾಲ್ಕು, ಷಹಾಪುರ ಕಂದಾಯ ತಾಲ್ಲೂಕಿಗೆ ಇಬ್ಬರು ಹಾಗೂ ಶೋರಾಪುರ ಕಂದಾಯ ತಾಲ್ಲೂಕಿಗೆ ಒಂದು ನೋಟರಿಗಳನ್ನಾಗಿ ನೇಮಕ ಮಾಡಲಾಗಿದೆ.

ಅಂತೆಯೇ (1) ಶ್ರೀ ದುರ್ಗಪ್ಪ ಮಾರ್ತಾಂಡಪ್ಪ ರಂಗನೋರ್, ವಕೀಲರು, ಯರ್ಗೋಳ್ ವಿಲೇಜ್, ಯಾದಗಿರಿ ತಾಲ್ಲೂಕು–585 218, ಯಾದಗಿರಿ ಜಿಲ್ಲೆ, (2) **ಶ್ರೀ ಶಿವಶರಣಪ್ಪ, ವಕೀಲರು,** ಸನ್ ಆಫ್ ಬಸವರಾಜ, ಹೌಸ್ ನಂ. 4–8–56/1, ವಿಶ್ವಗಂಗಾ ನಿವಾಸ್, ವಾಲ್ಮೀಕಿ ನಗರ್, ಯಾದಗಿರಿ–585 201, (3) ಶ್ರೀ ಶೇಖಪ್ಪ, ವಕೀಲರು, ಸನ್ ಆಫ್ ಶರಣಪ್ಪ, ಹೌಸ್ ನಂ. 4–6–63/ಎ, ಸಾದರ್ ದರ್ವಾಝಾ ಮೇನ್ ರೋಡ್, ಯಾದಗಿರಿ ತಾಲ್ಲೂಕು–585 201, ಯಾದಗಿರಿ ಜಿಲ್ಲೆ ಮತ್ತು (4) ಶ್ರೀ ಚಂದ್ರಾಯ, ವಕೀಲರು, ಸನ್ ಆಫ್ ಅಯ್ಯಣ್ಣ, ಬಸವ ನಿವಾಸ್, ಬಸವೇಶ್ವರ ನಗರ್, ಯಾದಗಿರಿ ತಾಲ್ಲೂಕು–585 202, ಯಾದಗಿರಿ ಜಿಲ್ಲೆ ಇವರುಗಳನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ಯಾದಗಿರಿ ಕಂದಾಯ ತಾಲ್ಲೂಕಿನ** ನೋಟರಿಗಳನ್ನಾಗಿ ನೇಮಿಸಿದೆ.

**ಶ್ರೀ ಸಯ್ಯದ್ ಇಬ್ರಾಹಿಂ, ವಕೀಲರು,** ಸನ್ ಆಫ್ ಸಯ್ಯದ್ ವಾಲಿ, ಷಾ ಕಾಲೋನಿ, ಷಹಾಪುರ–585 223 ಮತ್ತು **ಶ್ರೀ ಬಸವರಾಜ್, ವಕೀಲರು,** ಸನ್ ಆಫ್ ಚಂದ್ರಾಯ ಬಸರೆಡ್ಡಿ, ಹೌಸ್ ನಂ. 10–69 (13), ಬಸವ ನಿಲಯ, ಸಂಗಮೇಶ್ವರ ನಗರ್, ಷಹಾಪುರ–585 223, ಯಾದಗಿರಿ ಜಿಲ್ಲೆ ಇವರುಗಳನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ಶಹಾಪುರ ಕಂದಾಯ ತಾಲ್ಲೂಕಿನ** ನೋಟರಿಗಳನ್ನಾಗಿ ನೇಮಿಸಿದೆ.

ಶ್ರೀ **ಬಸಪ್ಪ, ವಕೀಲರು,** ಸನ್ ಆಫ್ ಹಯ್ಯಲ್ಲಪ್ಪ ಕಿಲ್ಲೇದಾರ್, ಡಾ॥ ಚನ್ನರೆಡ್ಡಿ ರೆಸಿಡೆನ್ಸ್ ಹತ್ತಿರ, ತಹಸಿಲ್ ರೋಡ್, ಉಪ್ಪಾರ ಮೊಹಲ್ಲ, ಶೋರಾಪುರ–585 224, ಯಾದಗಿರಿ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ಶೋರಾಪುರ ಕಂದಾಯ ತಾಲ್ಲೂಕಿನ** ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1,000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣಪತ್ರ ನೀಡಿದ ನಂತರ ಶ್ರೀಯುತರುಗಳ ಹೆಸರುಗಳನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ಜಯರಾಮು**

PR 131 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

SC 25 ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ ನಾಗಮಂಗಲ ಕಂದಾಯ ತಾಲ್ಲೂಕಿನಲ್ಲಿ ಖಾಲಿಯಿರುವ ನೋಟರಿ ಹುದ್ದೆಯನ್ನು ತುಂಬುವ ಬಗ್ಗೆ (ಶ್ರೀ ಎ.ಎನ್. ಕೃಷ್ಣೇಗೌಡ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಸಾರ್ವಜನಿಕರ ಮನವಿ ದಿನಾಂಕ: 29–04–2012
2. ಸರ್ಕಾರದ ಪತ್ರ ಸಂಖ್ಯೆ : ಲಾ 154 ಎಲ್‌ಸಿಎಲ್ 2012, ದಿನಾಂಕ: 18–07–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಜಿಲ್ಲೆ, ದಿನಾಂಕ: 17–11–2012
4. ಸರ್ಕಾರದ ಪತ್ರ ಸಂಖ್ಯೆ : ಲಾ 154 ಎಲ್‌ಸಿಎಲ್ 2012, ದಿನಾಂಕ: 02–01–2013
5. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಜಿಲ್ಲೆ, ದಿನಾಂಕ: 26–03–2013
6. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24–02–2009
7. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23–07–2013
8. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 154 ಎಲ್‌ಸಿಎಲ್ 2012, ದಿನಾಂಕ: 28–09–2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರವು ಸಾರ್ವಜನಿಕರಿಂದ ಮನವಿಗಳನ್ನು ಸ್ವೀಕರಿಸಿದ್ದು, ಸದರಿ ಮನವಿಯಲ್ಲಿ ಕೋರಿರುವಂತೆ, ಓದಲಾದ (2)ರ ಸರ್ಕಾರಿ ಪತ್ರ ದಿನಾಂಕ: 18–07–2012ರಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಜಿಲ್ಲೆ ಇವರನ್ನು ಶ್ರೀ ಎ.ಎನ್. ಕೃಷ್ಣೇಗೌಡ, ನೋಟರಿ ಇವರ ಮರಣ ಪ್ರಮಾನ ಪತ್ರವನ್ನು ಒದಗಿಸುವುದರೊಂದಿಗೆ, ಇವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೇ ಎಂಬ ಬಗ್ಗೆ ವರದಿ ಕೋರಲಾಗಿದ್ದು, ಅದರಂತೆ, ಓದಲಾದ (3)ರ ಪ್ರಸ್ತಾವನೆಯಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಜಿಲ್ಲೆ ಇವರು ಸದರಿ ನಿಧನ ಹೊಂದಿರುವ ನೋಟರಿಯವರ ಮರಣ ಪ್ರಮಾಣ ಪತ್ರವನ್ನು ಒದಗಿಸುವುದರೊಂದಿಗೆ, ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವ ಅವಶ್ಯಕತೆ ಇದೆಯೆಂದು ವರದಿ ನೀಡಿರುತ್ತಾರೆ.

ಓದಲಾದ (4)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಜಿಲ್ಲೆ ಇವರನ್ನು ದಿನಾಂಕ: 02–01–2013ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (5)ರಲ್ಲಿ ದಿನಾಂಕ: 26–03–2013ರ ಪ್ರಸ್ತಾವನೆಯೊಂದಿಗೆ 11 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (6)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (7)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (8)ರ ದಿನಾಂಕ: 28–09–2013ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 154 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ: 13ನೇ ಜನವರಿ, 2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ **ಶ್ರೀ ಸಿ.ಜಿ. ಲಕ್ಷ್ಮಿನಾರಾಯಣ, ವಕೀಲರು,** ಸನ್ ಆಫ್ ಶ್ರೀ ಸಿ.ಎನ್. ಗಂಗೇಗೌಡ, ಕೇರ್ ಆಫ್ ಜಯಲಕ್ಷ್ಮಮ್ಮ, ಡೋರ್ ನಂ. 51, ಜೆ.ಬಿ. ಎಕ್ಸ್‌ಟೆನ್ಷನ್, ನಾಗಮಂಗಲ–571 432, ಮಂಡ್ಯ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ನಾಗಮಂಗಲ ಕಂದಾಯ ತಾಲ್ಲೂಕಿನ** ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1,000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ಜಯರಾಮು**

PR 132
SC 25

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಹಾವೇರಿ ಜಿಲ್ಲೆಯ ಹಾನಗಲ್ಲ ಕಂದಾಯ ತಾಲ್ಲೂಕಿಗೆ ಒಂದು ಹೆಚ್ಚುವರಿ ನೋಟರಿಯನ್ನು ತುಂಬುವ ಬಗ್ಗೆ

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಲಾ 244 ಎಲ್‌ಸಿಎಲ್ 2010, ದಿನಾಂಕ: 18-06-2012
2. ಸರ್ಕಾರದ ಪತ್ರ ಸಂಖ್ಯೆ ಲಾ 172 ಎಲ್‌ಸಿಎಲ್ 2012, ದಿನಾಂಕ: 16-08-2012
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ, ದಿನಾಂಕ: 05-09-2012
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24-02-2009
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24-07-2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23-07-2013
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 172 ಎಲ್‌ಸಿಎಲ್ 2012, ದಿನಾಂಕ: 28-09-2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶ ದಿನಾಂಕ: 18-06-2012ರಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಹೆಚ್ಚುವರಿಯಾಗಿ ಒಂದು ನೋಟರಿ ಹುದ್ದೆಯನ್ನು ಹಾವೇರಿ ಜಿಲ್ಲೆಯ ಹಾನಗಲ್ ಕಂದಾಯ ತಾಲ್ಲೂಕಿಗೆ ಸೃಜಿಸಲಾಗಿತ್ತು. ಸದರಿ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಅಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಓದಲಾದ (2)ರ ದಿನಾಂಕ: 16-08-2012ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾವೇರಿ ಜಿಲ್ಲೆ ಇವರನ್ನು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ದಿನಾಂಕ: 05-09-2012ರ ಪ್ರಸ್ತಾವನೆಯೊಂದಿಗೆ 11 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ: 28-09-2013ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ: ಲಾ 172 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ: 09ನೇ ಜನವರಿ, 2014

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ **ಶ್ರೀ ದಿನೇಶ್ ಲಕ್ಮಾಪುರ್, ವಕೀಲರು,** ಸನ್ ಆಫ್ ಶ್ರೀ ನಾರಾಯಣಪ್ಪ, ಕಂಚಿನೆಗಳೂರು ಪೋಸ್ಟ್, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ-581 104, ಇವರನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ಹಾನಗಲ್ ಕಂದಾಯ ತಾಲ್ಲೂಕಿನ** ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1,000-00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ಜಯರಾಮು**

PR 133
SC 25

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ಕಂದಾಯ ತಾಲ್ಲೂಕಿಗೆ ಒಂದು ನೋಟರಿ ಹುದ್ದೆ ತುಂಬುವ ಬಗ್ಗೆ (ಶ್ರೀ ಜಿ.ಎನ್. ಶಿವಾನಂದರೆಡ್ಡಿ ಇವರ ನಿಧನದಿಂದ ತೆರವಾದ ಹುದ್ದೆ)

**ಓದಲಾಗಿದೆ :**

1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ಪತ್ರ ದಿನಾಂಕ: 07–01–2012
2. ಸರ್ಕಾರದ ಪತ್ರ ಸಂಖ್ಯೆ : ಲಾ 21 ಎಲ್‌ಸಿಎಲ್ 2012, ದಿನಾಂಕ: 03–02–2012
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ದಿನಾಂಕ: 09–10–2012 ಮತ್ತು 16–03–2013
4. ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ: ಜಿಎಸ್‌ಆರ್ 114(ಎ), ದಿನಾಂಕ: 24–02–2009
5. ಸಂದರ್ಶನ ಮಂಡಳಿ ರಚನೆ ಅಧಿಸೂಚನೆ ಸಂಖ್ಯೆ: ಲಾ 61 ಎಲ್‌ಸಿಎಲ್ 2009, ದಿನಾಂಕ: 24–07–2010 ಮತ್ತು ಲಾ 53 ಎಲ್‌ಸಿಎಲ್ 2013, ದಿನಾಂಕ: 23–07–2013
6. ಸಂದರ್ಶನ ಸೂಚನಾ ಪತ್ರ ಸಂಖ್ಯೆ: ಲಾ 21 ಎಲ್‌ಸಿಎಲ್ 2012, ದಿನಾಂಕ: 28–09–2013

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ದಿನಾಂಕ: 07–01–2012ರಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಶ್ರೀ ಜಿ.ಎನ್. ಶಿವಾನಂದ ರೆಡ್ಡಿ, ನೋಟರಿ ಇವರ ಮರಣ ಪ್ರಮಾಣ ಪತ್ರವನ್ನು ಒದಗಿಸಿ, ಅವರ ನಿಧನದಿಂದ ತೆರವಾದ ಹುದ್ದೆಯನ್ನು ತುಂಬುವಂತೆ ಮನವಿ ಮಾಡಿರುತ್ತಾರೆ. ಅದರಂತೆ, ಓದಲಾದ (2)ರ ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯನ್ನು ಭರ್ತಿ ಮಾಡಲು ಸ್ಥಳೀಯರಿಂದ ಅರ್ಜಿಗಳನ್ನು ಆಹ್ವಾನಿಸಿ ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ದಿನಾಂಕ: 03–02–2012ರಂದು ಕೋರಲಾಗಿತ್ತು.

ಅದರಂತೆ ಮೇಲೆ ಓದಲಾದ (3)ರಲ್ಲಿ ದಿನಾಂಕ: 09–10–2012 ಮತ್ತು 16–03–2013ರ ಪ್ರಸ್ತಾವನೆಯೊಂದಿಗೆ 22 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಮೇಲೆ ಓದಲಾದ (4)ರಲ್ಲಿ ನೋಟರಿಗಳ ತಿದ್ದುಪಡಿ ನಿಯಮಗಳು 2009ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಮೇಲೆ ಓದಲಾದ (5)ರ ಅಧಿಸೂಚನೆಗಳಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳುಹಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಮೇಲೆ ಓದಲಾದ (6)ರ ದಿನಾಂಕ: 28–09–2013ರಲ್ಲಿ ಸಂದರ್ಶನ ಸೂಚನಾ ಪತ್ರದಲ್ಲಿ ಸೂಚಿಸಲಾಗಿತ್ತು. ಅದರಂತೆ, ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ವರದಿ ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಲಾ 21 ಎಲ್‌ಸಿಎಲ್ 2012, ಬೆಂಗಳೂರು, ದಿನಾಂಕ: 08ನೇ ಜನವರಿ, 2014**

ನೋಟರಿಗಳ ಅಧಿನಿಯಮ, 1952 ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿಗಳ ನಿಯಮಗಳು, 1956 ಹಾಗೂ ನಂತರದ ತಿದ್ದುಪಡಿ ನಿಯಮಗಳನ್ವಯ ಪರಿಶೀಲಿಸಿ, ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ **ಶ್ರೀ ಹೆಚ್. ಪ್ರಕಾಶ, ವಕೀಲರು,** ಸನ್ ಆಫ್ ಹನುಮಂತಪ್ಪ ಬಿ. ದೊಡ್ಡಹೊಸಹಳ್ಳಿ ವಿಲೇಜ್, ಬೆಟ್ಟಕೋಟೆ ಪೋಸ್ಟ್, ಚನ್ನರಾಯಪಟ್ಟಣ ಹೋಬಳಿ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ **ದೇವನಹಳ್ಳಿ ಕಂದಾಯ ತಾಲ್ಲೂಕಿನ** ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070–ಇತರೆ ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06 ಇತರೆ ಬಾಬ್ತುಗಳಿಗೆ (0070–01–501–0–06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1,000–00 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಅವರಿಗೆ ವೃತ್ತಿ ಪ್ರಮಾಣಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ, 1952ರ ಕಲಂ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಎಸ್. ಜಯರಾಮು**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

PR 134
SC 25

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ಸೇರ್ಪಡೆ ಆದೇಶ**

**ಸಂ: ಹಿಂವಕ 488 ಬಿಎಂಎಸ್ 2013, ಬೆಂಗಳೂರು, ದಿನಾಂಕ:01–01–2014**

ಸರ್ಕಾರದ ಆದೇಶ ಸಂಖ್ಯೆ: ಹಿಂವಕ 488 ಬಿಎಂಎಸ್ 2013, ದಿನಾಂಕ:22–10–2013ರಲ್ಲಿ 100 ಸಂಖ್ಯಾಬಲದ 30 ಹೊಸ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡಿರುವ ಪ್ರಸ್ತಾವನೆ ಮತ್ತು ಆದೇಶದ ಭಾಗದಲ್ಲಿ ಇರುವ ಹೊಸ ಮಹಿಳಾ ನರ್ಸಿಂಗ್ ಮೆಟ್ರಿಕ್ ನಂತರ ವಿದ್ಯಾರ್ಥಿನಿಲಯಗಳು ಎಂಬುದರ ಬದಲಾಗಿ **"ಶ್ರೀಮತಿ ಇಂದಿರಾ ಗಾಂಧಿ ಹಿಂದುಳಿದ ವರ್ಗಗಳ ಮೆಟ್ರಿಕ್ ನಂತರದ ಮಹಿಳಾ ನರ್ಸಿಂಗ್ ವಿದ್ಯಾರ್ಥಿನಿಲಯ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಬಿ.ರಘುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ–2,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

**PR. 70**
**SC-100**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಯೋಇ 44 ಯೋವಿವಿ 2013 ದಿನಾಂಕ : 27–05–2013.
2. ಸರ್ಕಾರಿ ಆದೇಶ ಸಂಖ್ಯೆ:ಯೋಇ 44 ಯೋವಿವಿ 2013 ದಿನಾಂಕ : 28–05–2013.
3. ಸರ್ಕಾರಿ ಆದೇಶ ಸಂಖ್ಯೆ:ಯೋಇ 44 ಯೋವಿವಿ 2013 ದಿನಾಂಕ : 10–07–2013.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಿಂದ (3)ರ ಸರ್ಕಾರಿ ಆದೇಶಗಳಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20ಅಂಶಗಳ/15ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಪಡಿಸುವ ಸಲುವಾಗಿ ಜಿಲ್ಲಾ ಉಸ್ತುವಾರಿ ಸಚಿವರನ್ನು ನೇಮಕ ಮಾಡಿ ಆದೇಶಿಸಲಾಗಿತ್ತು.

ಪ್ರಸ್ತುತ ಶ್ರೀ ಸಂತೋಷ್ ಲಾಡ್, ಮಾಜಿ ಮೂಲಭೂತ ಸೌಕರ್ಯ ಅಭಿವೃದ್ಧಿ, ವಾರ್ತಾ ಇಲಾಖಾ ಸಚಿವರ ರಾಜೀನಾಮೆಯಿಂದ ತೆರವಾಗಿರುವ ಧಾರವಾಡ ಜಿಲ್ಲಾ ಉಸ್ತುವಾರಿ ಸಚಿವರ ಸ್ಥಾನ ಖಾಲಿಯಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಯೋಇ 44 ಯೋವಿವಿ 2013 ದಿನಾಂಕ : 26–12–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಜಿಲ್ಲಾ ಮಟ್ಟದ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮ ಮತ್ತು 20 ಅಂಶಗಳ/15 ಅಂಶಗಳ ಕಾರ್ಯಕ್ರಮಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಶ್ರೀ ದಿನೇಶ್ ಗುಂಡೂರಾವ್, ಮಾನ್ಯ ಆಹಾರ ಮತ್ತು ನಾಗರೀಕ ಪೂರೈಕೆ ಹಾಗೂ ಗ್ರಾಹಕ ವ್ಯವಹಾರಗಳ ಸಚಿವರು, ಇವರಿಗೆ ಈಗಿರುವ ಚಿಕ್ಕಬಳ್ಳಾಪುರ ಜಿಲ್ಲಾ ಉಸ್ತುವಾರಿ ಜೊತೆಗೆ ಹೆಚ್ಚುವರಿಯಾಗಿ ಧಾರವಾಡ ಜಿಲ್ಲೆಯ ಜಿಲ್ಲಾ ಉಸ್ತುವಾರಿ ಸಚಿವರನ್ನಾಗಿ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್. ಉಮಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ–1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**PR. 79**
**SC-100**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು (ಸಮೂಹ–ಬಿ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ, ಪ್ರಸ್ತುತ ಸಹಾಯಕ ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರಿ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರ ಕಛೇರಿ ಆದೇಶ ಸಂಖ್ಯೆ: ಆಡಳಿತ:445:12–13 ದಿನಾಂಕ : 11–09–2012.
2. ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರ ಮೇಲ್ಮನವಿ ದಿನಾಂಕ: 05–11–2012.
3. ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರ ಪತ್ರ ಸಂಖ್ಯೆ: ಆಸಾಂನಿ/35/ಆಡಳಿತ–1/2011–12 ದಿನಾಂಕ: 03–10–2013.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಓದಲಾದ ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ಕಛೇರಿ ಆದೇಶದನ್ವಯ ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರು ಈ ಹಿಂದೆ ಚಿಕ್ಕಬಳ್ಳಾಪುರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಅವರ ವಿರುದ್ಧ ದೋಷಾರೋಪ ಸಂಬಂಧ ಇಲಾಖಾ ವಿಚಾರಣೆ ನಡೆಸಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (iii)ರಡಿಯಲ್ಲಿ ಇವರಿಗೆ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಸಹಿತವಾಗಿ (with cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿತ್ತು.

2. ಮೇಲೆ (2)ರಲ್ಲಿ ಓದಲಾದ ಮನವಿಯಲ್ಲಿ ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರು ಅವರಿಗೆ ವಿಧಿಸಿರುವ ದಂಡನೆಗೆ ಅರ್ಹರಾಗುವಂಥಹ ಯಾವುದೇ ದುರ್ನಡತೆಯನ್ನು ಪ್ರದರ್ಶಿಸಿರುವುದಿಲ್ಲ ಹಾಗೂ ವಿಚಾರಣೆಯ ಹಂತದಲ್ಲೂ ನನಗೆ ಅನ್ಯಾಯ ಆಗಿರುವುದರಿಂದ, ಅವರಿಗೆ ವಿಧಿಸಿರುವ ಶಿಕ್ಷೆಯನ್ನು ರದ್ದುಗೊಳಿಸುವಂತೆ ಸರ್ಕಾರಕ್ಕೆ ಮೇಲ್ಮನವಿ ಸಲ್ಲಿಸಿರುತ್ತಾರೆ.

3. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಪ್ರಭಾರ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರು ನಿರ್ದೇಶನಾಲಯದ ಆದೇಶ ಸಂಖ್ಯೆ:ಆಡಳಿತ:445:2012-13 ದಿನಾಂಕ:11-09-2012ರಲ್ಲಿ ನೀಡಿರುವ ಸಂಚಿತ ಪರಿಣಾಮವಾಗಿ (with cumulative effect) ಒಂದು ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿದಿರುವ ದಂಡನೆಯು ಅಧಿಕವಾಗಿದ್ದು, ಸದರಿ ಆದೇಶವನ್ನು ಪರಿಷ್ಕರಿಸಿ, ಸಂಚಿತ ಪರಿಣಾಮ ರಹಿತವಾಗಿ ವೇತನ ಬಡ್ತಿಯನ್ನು (without cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಬಹುದಾಗಿರುತ್ತದೆ ಎಂಬುದಾಗಿ ಅಭಿಪ್ರಾಯ ನೀಡಿರುತ್ತಾರೆ.

4. ಮೇಲೆ (2) ಮತ್ತು (3)ರಲ್ಲಿನ ಪತ್ರಗಳಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು, (ಸಮೂಹ-ಬಿ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ, ಪ್ರಸ್ತುತ ಸಹಾಯಕ ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರ ಮೇಲ್ಮನವಿಯನ್ನು ಮೇಲ್ಮನವಿ ಪ್ರಾಧಿಕಾರವಾದ ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ದಿನಾಂಕ:18-12-2013ರಂದು ವಿಚಾರಣೆ ನಡೆಸಿ, ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿದ್ದು, ಸದರಿ ಅಧಿಕಾರಿಯವರು ಅನಾರೋಗ್ಯದ ಹಿನ್ನೆಲೆಯಲ್ಲಿ ಸಲ್ಲಿಸಿದ್ದ ರಜೆ ಅರ್ಜಿಗಳನ್ನು ಪರಿಗಣಿಸಿ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬೆಂಗಳೂರು, ಇವರು ವಿಧಿಸಿರುವ ದಂಡನಾದೇಶವನ್ನು ಮಾರ್ಪಡಿಸಿ ಅವರಿಗೆ ವಾಗ್ದಂಡನೆಯನ್ನು ವಿಧಿಸಲು ನಿರ್ಧರಿಸಲಾಯಿತು. ಅದರಂತೆ ಈ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ : ಪಿಡಿ 176 ಎಸ್‌ಎಸ್‌ಎಂ 2012 ಬೆಂಗಳೂರು, ದಿನಾಂಕ: 02-01-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ-25(1)(c)(i)ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, (ಸಮೂಹ-ಬಿ) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ, ಪ್ರಸ್ತುತ ಸಹಾಯಕ ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು, ಇವರಿಗೆ ಸದರಿ ನಿಯಮಗಳ ನಿಯಮ 8 (ii)ನೇ ಖಂಡದಡಿಯಲ್ಲಿ ನಿರ್ದಿಷ್ಟಪಡಿಸಲಾಗಿರುವ ವಾಗ್ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಶ್ರೀಮತಿ ಎಸ್.ಎಸ್. ಹುಸೇನಿ, ಸಹಾಯಕ ನಿರ್ದೇಶಕರು, ಇವರು ಅನಾರೋಗ್ಯದ ಹಿನ್ನೆಲೆಯಲ್ಲಿ ಸಲ್ಲಿಸಿದ್ದ ರಜೆ ಅರ್ಜಿಯನ್ನು ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರು ಪರಿಗಣಿಸಿ, ಸದರಿ ಅವಧಿಗೆ ಅವರ ಖಾತೆಯಲ್ಲಿರುವ ರಜೆಯನ್ನು ಮಂಜೂರು ಮಾಡತಕ್ಕದ್ದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ರವೀಂದ್ರಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ (ಎಸ್-5).

**PR. 80**

## ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವಾಲಯ

**ವಿಷಯ :** ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆ- ಮಂಡನಾಧಿಕಾರಿ ನೇಮಕ-ಪರಿಷ್ಕೃತ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 43 ಯುಇಸೇ 2010, ದಿನಾಂಕ: 12-11-2013.
2. ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರ ಪತ್ರ ಸಂಖ್ಯೆ: ಡಿವೈಎಸ್‌ಎಸ್/ಸಿ3/7/10-11, ದಿನಾಂಕ: 21-11-2013.

**ಪ್ರಸ್ತಾವನೆ :**

ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಕೆ. ರಾಧಾಕೃಷ್ಣ ಹೊಳ್ಳ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಶ್ರೀ ಜಿತೇಂದ್ರ ಶೆಟ್ಟಿ, ಉಪ ನಿರ್ದೇಶಕರು (ಆಡಳಿತ), ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ (1)ರ ಆದೇಶದಲ್ಲಿ ನೇಮಿಸಲಾಗಿರುತ್ತದೆ.

ಪ್ರಸ್ತುತ ಶ್ರೀ ವಿ.ಕೆ.ಗೂಡೋಡಗಿ, ನಿವೃತ್ತ ಜಂಟಿ ನಿರ್ದೇಶಕರು ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಮಂಡನಾಧಿಕಾರಿಯಾಗಿ ಶ್ರೀ ಜಿತೇಂದ್ರ ಶೆಟ್ಟಿ, ಉಪ ನಿರ್ದೇಶಕರು(ಆಡಳಿತ), ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರನ್ನೇ ನೇಮಿಸಲಾಗಿರುವುದರಿಂದ ಎರಡೆರಡು ವಿಚಾರಣೆಗೆ ಮಂಡನಾಧಿಕಾಯಾಗಿ ಕಾರ್ಯನಿರ್ವಹಿಸಲು ಕಷ್ಟಸಾಧ್ಯವಾಗಿರುವುದರಿಂದ ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ವಿರುದ್ಧದ ಇಲಾಖಾ ವಿಚಾರಣೆಗೆ ಮಂಡನಾಧಿಕಾರಿಯನ್ನಾಗಿ ಶ್ರೀ ಜಿ.ಎನ್.ಮೃತ್ಯಂಜಯ, ಲೆಕ್ಕಾಧೀಕ್ಷಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರನ್ನು ನೇಮಿಸಿ, ಪರಿಷ್ಕೃತ ಆದೇಶ ಹೊರಡಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರು ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ : ಯುಸೇಇ 43 ಯುಇಸೇ 2010 ಬೆಂಗಳೂರು, ದಿನಾಂಕ: 07-12-2013.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಶ್ರೀ ರಾಜು ಬಾವಿಹಳ್ಳಿ, ಸಹಾಯಕ ನಿರ್ದೇಶಕರು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 43 ಯುಇಸೇ 2010, ದಿನಾಂಕ:12-11-2013ರಲ್ಲಿ ಶ್ರೀ ಜಿತೇಂದ್ರ ಶೆಟ್ಟಿ, ಉಪ ನಿರ್ದೇಶಕರು (ಆಡಳಿತ), ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದ್ದನ್ನು ಪರಿಷ್ಕರಿಸಿ, ಇವರ ಬದಲಾಗಿ ಶ್ರೀಮತಿ ಕೆ.ಎಂ. ನಾಗರತ್ನ, ಸಹಾಯಕ ನಿರ್ದೇಶಕರು, ಕೇಂದ್ರ ಕಛೇರಿ, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಕೆ.ಸಾವಿತ್ರಿ,**
ಸರ್ಕಾರದ ಉಪ ಕಾರ್ಯದರ್ಶಿ,
ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ.

**PR. 81**

**S.C. 10**

**ಸಹಕಾರ ಸಚಿವಾಲಯ**

**ತಿದ್ದುಪಡಿ ಆದೇಶ**

**ಸಂಖ್ಯೆ : ಸಿಒ 141 ಸಿಎಲ್ಎಂ 2013, ಬೆಂಗಳೂರು, ದಿನಾಂಕ : 03-01-2014.**

ಸರ್ಕಾರದ ಆದೇಶ ಸಂಖ್ಯೆ: ಸಿಒ 141 ಸಿಎಲ್ಎಂ 2013, ದಿನಾಂಕ: 19-12-2013 ಅನ್ನು ಮಾರ್ಪಡಿಸಿ 2013-14ನೇ ಸಾಲಿನ ಆಯವ್ಯಯದಲ್ಲಿ **'ಸಹಕಾರ ಇಲಾಖೆಯ ಕಛೇರಿ ಕಟ್ಟಡಗಳ ನಿರ್ಮಾಣ' ಲೆಕ್ಕ ಶೀರ್ಷಿಕೆ 386-ನಿರ್ಮಾಣ-4425-00-107-0-11 (ಯೋಜನೆ)** ಅಡಿಯಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇದರ ಕಟ್ಟಡಗಳ ನಿರ್ಮಾಣಕ್ಕೆ ರೂ.17.50 ಲಕ್ಷಗಳನ್ನು (ಹದಿನೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕುಮಟಾ ಉಪವಿಭಾಗ, ಕುಮಟಾ ಇದರ ಕಟ್ಟಡಗಳ ನಿರ್ಮಾಣಕ್ಕೆ ರೂ.20.00ಲಕ್ಷಗಳು (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ) ಸೇರಿದಂತೆ ಒಟ್ಟು ರೂ.37.50 (ಮೂವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ) ಲಕ್ಷಗಳನ್ನು ಬಿಡುಗಡೆಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಎಸ್.ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**PR 82**

**S.C. 50**

**ಸಹಕಾರ ಸಚಿವಾಲಯ**

**ವಿಷಯ :** ಮೈಸೂರು ಜಿಲ್ಲಾ ಮಹಿಳೆಯರ ಮೀನು ಉತ್ಪಾದಕರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ., ಮೈಸೂರು ಇದರ 1997-98 ರಿಂದ 2006-2007ರ ಅವಧಿಯ ಪರಿಶೋಧಿತ ಲೆಕ್ಕಪತ್ರಗಳನ್ನು ಪುನರ್ ಲೆಕ್ಕಪರಿಶೋಧನೆಗೆ ಒಳಪಡಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪತ್ರ ಸಂಖ್ಯೆ: ತಪಫ/ಮೈವಿ/09/2012-13/12477/ ದಿನಾಂಕ: 17-07-2012, ದಿನಾಂಕ: 15-01-2013, ದಿನಾಂಕ: 08-07-2013. ದಿನಾಂಕ: 27-07-2013, ದಿನಾಂಕ: 13-09-2013 ಹಾಗೂ ದಿನಾಂಕ: 03-12-2013. .

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರ ಪತ್ರಗಳಲ್ಲಿ ಮೈಸೂರು ಜಿಲ್ಲಾ ಮಹಿಳೆಯರ ಮೀನು ಉತ್ಪಾದಕರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ., ಇದರ 1997-98 ರಿಂದ 2006-07ರ ಅವಧಿಯ ಪರಿಶೋಧಿತ ಲೆಕ್ಕಪತ್ರಗಳಲ್ಲಿ ಮೇಲ್ನೋಟಕ್ಕೆ ಈ ಕೆಳಕಂಡ ನ್ಯೂನ್ಯತೆಗಳು ಕಂಡು ಬಂದಿರುವುದರಿಂದ ಉಪನಿರ್ದೇಶಕ ಶ್ರೇಣಿಯ ಅಧಿಕಾರಿಯಿಂದ ಪುನರ್ ಲೆಕ್ಕಪರಿಶೋಧನೆಗೆ ಒಳಪಡಿಸಲು ಸೂಕ್ತ ಆದೇಶ ಹೊರಡಿಸುವಂತೆ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಸರ್ಕಾರವನ್ನು ಕೋರಿಕೊಂಡಿರುತ್ತಾರೆ.

1. ಸಂಘದ ಮಾಜಿ ಅಧ್ಯಕ್ಷರಾದ ಶ್ರೀ ಎಸ್.ಕೃಷ್ಣಪ್ಪ ಇವರ ಮೇಲೆ ರೂ.4,66,710-50/-ಗಳ ಹಣ ದುರುಪಯೋಗಕ್ಕೆ ಸಂಬಂಧಿಸಿ ಹೊಣೆಗಾರಿಕೆಯನ್ನು ನಿಗಧಿಪಡಿಸುವಾಗ ದೋಷಪೂರಿತ ಲೆಕ್ಕಪರಿಶೋಧನಾ ವರದಿಯಲ್ಲಿ ಹಣದುರುಪಯೋಗದ ಸ್ವರೂಪ ಹಾಗೂ ಹೊಣೆಗಾರಿಕೆಯ ಸಮರ್ಥನೆಯಲ್ಲಿ ಅಗತ್ಯ ವಿವರಗಳೊಂದಿಗೆ ದಾಖಲೆಗಳ ಸಮೇತ ವಿಶ್ಲೇಷಿಸಿರುವುದಿಲ್ಲ.

2. ಕರ್ನಾಟಕ ಸಹಕಾರಿ ಮೀನುಗಾರಿಕೆ ಮಹಾಮಂಡಳಿ ನಿ., ಮೈಸೂರು ಇವರು ಈ ಸಂಸ್ಥೆಗೆ ಗುತ್ತಿಗೆ ಆಧಾರದ ನೇಲೆ ನೀಡಿದ್ದ ಕೆರೆಗಳನ್ನು ದಿನಾಂಕ:10–09–1998ರಂದು ಸದರಿ ಸಂಘದಿಂದ ಹಿಂದಕ್ಕೆ ಪಡೆದಾಗ, ಆ ದಿನಾಂಕದಿಂದ ಆ ಕೆರೆಗಳಲ್ಲಿ ಇರುವ ಒಟ್ಟು ರೂ.1,63,61,131ಗಳ ಮೌಲ್ಯದ ಮೀನು ದಾಸ್ತಾನು ಇದ್ದಿತ್ತೆಂದು ಮೀನುಗಾರಿಕೆ ಮಹಾಮಂಡಳಿಯ ಮೇಲೆ ಜವಾಬ್ದಾರಿಯನ್ನು ನಿಗಧಿಪಡಿಸಿದ್ದು, ದೋಷಪೂರಿತ ಲೆಕ್ಕಪರಿಶೋಧನಾ ವರದಿಯಲ್ಲಿ ಈ ಮೌಲ್ಯವನ್ನು ನಿರ್ಧರಿಸುವಲ್ಲಿ ಅನುಸರಿಸುವ ಪದ್ಧತಿಯನ್ನು ಬೇರೆ ಯಾವುದೇ ಮೀನುಗಾರಿಕೆ ಸಹಕಾರ ಸಂಘಗಳ ಲೆಕ್ಕಪರಿಶೋಧನೆಯಲ್ಲಿ ಅನುಸರಿಸಿರುವುದಿಲ್ಲ.
3. 1997–98ನೇ ಸಾಲಿನಲ್ಲಿ ಸಂಘಕ್ಕೆ ಅವಶ್ಯವಿರುವ ರೂ.8.000 ಮೌಲ್ಯದ ಪೀಠೋಪಕರಣಗಳನ್ನು ಉದ್ರಿಯಾಗಿ (ಕ್ರೆಡಿಟ್) ಸರಬರಾಜು ಮಾಡಿದ ಯಾವುದೇ ವ್ಯಕ್ತಿ/ಸಂಸ್ಥೆಯು 9 ವರ್ಷಗಳವರೆಗೆ ಸದರಿ ಹಣವನ್ನು ಸಂಘದಿಂದ ಪಡೆಯದೇ ಇರಲು ಸಾಧ್ಯವಿರುವುದಿಲ್ಲ. ಆದರೆ 31–03–2007ರ ಅಂತ್ಯಕ್ಕೂ ಸಹ ಈ ಜವಾಬ್ದಾರಿಯು ಸಂಘದ ಅಢಾವೆ ಪತ್ರಿಕೆಯಲ್ಲಿ ಹಾಗೆಯೇ ಮುಂದುವರೆದಿರುತ್ತದೆ. ಇದರ ಸತ್ಯಾಸತ್ಯತೆಯ ಬಗ್ಗೆ ಕೂಲಂಕಷವಾದ ಪರಿಶೀಲನೆ ಅವಶ್ಯವಿರುತ್ತದೆ.
4. 1996–97ನೇ ಸಾಲಿನಲ್ಲಿ ಸಂಘವು ವಿವಿಧ ದಿನಾಂಕಗಳಂದು ಖರೀದಿಸಿರುವ ಮೀನು ಮರಿಗಳ ವಿವರಗಳನ್ನು ವಿವರವಾಗಿ ಪರಿಶೀಲಿಸಲಾಗಿ, ಇನ್‌ವಾಯ್ಸ್ ಸಂಖ್ಯೆಯ 687 ಮತ್ತು 688 ಕ್ರಮವಾಗಿ 5 ಮತ್ತು 4 ಬಾರಿ ವಿವಿಧ ದಿನಾಂಕಗಳಂದು ತಪ್ಪಾಗಿ ಉಲ್ಲೇಖಿಸಲ್ಪಟ್ಟಿರುವುದು ಕಂಡು ಬರುತ್ತದೆ. ಒಂದೇ ಸಂಖ್ಯೆಯುಳ್ಳ ಇನ್‌ವಾಯ್ಸ್‌ನ್ನು ಒಂದಕ್ಕಿಂದ ಹೆಚ್ಚು ಬಾರಿ ವಿವಿಧ ದಿನಾಂಕಗಳಂದು ತೋರಿಸಲು ಬರುವುದಿಲ್ಲ. ಈ ಅಂಶದಿಂದ ಶ್ರೀಯುತ ಜಿ.ವಿ.ರಾಮಕೃಷ್ಣರವರು ನಡೆಸಿರುವ ಲೆಕ್ಕಪರಿಶೋಧನೆಯು ಅಸಮಂಜಸವೆಂದು ಮೇಲ್ನೋಟಕ್ಕೆ ಕಂಡು ಬರುತ್ತದೆ.
5. ದಿನಾಂಕ:07–10–1996ರ ಇನ್‌ವಾಯ್ಸ್ ಸಂಖ್ಯೆ: 702 ಮತ್ತು 703ರಲ್ಲಿ ಕಾಟ್ಲಾ ಜಾತಿಯ ಮೀನುಮರಿಗಳನ್ನು ಸಂಘವು ಖರೀದಿಸಿರುವುದಿಲ್ಲ. ಆದರೆ, ದಿನಾಂಕ:06–02–1997ರ ಇನ್ನೊಂದು ಇನ್‌ವಾಯ್ಸ್ ಸಂಖ್ಯೆ:917ರಲ್ಲಿ ಮೇಲಿನ ಎರಡು ಇನ್‌ವಾಯ್ಸ್‌ಗಳ ಬಾಬ್ತು ಒಟ್ಟು ರೂ.4,720/–ಗಳ ಮೌಲ್ಯದ ಕಾಟ್ಲಾ ಮೀನು ಮರಿ ಖರೀದಿಸಿದ ದರ ವ್ಯತ್ಯಾಸದ ಮೊಬಲಗು ತೋರಿಸಿ ಪಾವತಿಸಿರುತ್ತಾರೆ. ಇದು ಸಾಧ್ಯವಿರುವುದಿಲ್ಲ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಒ 93 ಸಂಮಾಸ 2011, ಬೆಂಗಳೂರು, ದಿನಾಂಕ: 21–12–2013**

ಮೈಸೂರು ಜಿಲ್ಲಾ ಮಹಿಳೆಯರ ಮೀನು ಉತ್ಪಾದಕರ ಮತ್ತು ಮಾರಾಟಗಾರರ ಸಹಕಾರ ಸಂಘ ನಿ., ಮೈಸೂರು ಇದರ 1997–98 ರಿಂದ 2006–2007ರ ಅವಧಿಯ ಲೆಕ್ಕಪರಿಶೋಧನೆಯನ್ನು ಇಲಾಖೆಯ ಒಬ್ಬ ಸಹಾಯಕ ನಿರ್ದೇಶಕರು ಕೈಗೊಂಡಿರುವುದರಿಂದ, ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮರು ಲೆಕ್ಕಪರಿಶೋಧನೆ ಯುಕ್ತವೆಂದು (Expedient) ಮೇಲ್ನೋಟಕ್ಕೆ (Prima-facie) ಕಂಡು ಬಂದಿರುವುದರಿಂದ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ಉಪ ನಿರ್ದೇಶಕರು, ಮೈಸೂರು ಜಿಲ್ಲೆ, ಮೈಸೂರು ಇವರನ್ನು ನೇಮಿಸಿ ಪುನರ್ ಲೆಕ್ಕಪರಿಶೋಧನೆ ಮಾಡಿಸುವುದು ಸೂಕ್ತವೆಂದು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ತಿದ್ದುಪಡಿ ಕಾಯ್ದೆ 2012ರ ಪ್ರಕರಣ 63(13)ರಂತೆ ಪುನರ್ ಲೆಕ್ಕಪರಿಶೋಧನೆ ಕೈಗೊಂಡು ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಹೆಚ್.ಎಸ್.ನಾಗರಾಜಯ್ಯ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

**P.R 83**
**S.C-50**

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ. ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು ತ್ವರಿತಗತಿ ನ್ಯಾಯಾಲಯ ಕೊಳ್ಳೇಗಾಲ ಇವರ ವಿರುದ್ಧ ಲೋಕಾಯುಕ್ತ ಪ್ರಕರಣದ ಸಂಬಂಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :**
1. ಅಪರ ನಿಬಂಧಕರು ವಿಚಾರಣೆಗಳು–07, ಕರ್ನಾಟಕ ಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪತ್ರ ಸಂ.ಕಂಪ್ಲೇಂಟ್/ಉಪಲೋಕ್/ಎಂವೈಎಸ್–1898/2013/ಎಆರ್–7, ದಿನಾಂಕ: 29–11–2013.
2. ಉಪ ಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿಯ ಸಂ:ಕಂಪ್ಲೇಂಟ್/ಉಪಲೋಕ್/ಎಂವೈಎಸ್–1898/2013/ಎಆರ್–7, ದಿನಾಂಕ: 27–11–2013.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಸಹಾಯಕ ನಿಬಂಧಕರು, ಲೀಗಲ್ ಓಪೀನಿಯನ್–1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ವರದಿ ದಿನಾಂಕ: 27–11–2013ನ್ನು ಲಗತ್ತಿಸಿ ಕಳುಹಿಸುತ್ತಾ, ಸದರಿ ವರದಿಯ ಅನುಸಾರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ: 12(3)ರ ಅನುಸಾರ ಪರಿಶೀಲಿಸಿ ಅದೇ ಕಾಯ್ದೆಯ ಕಲಂ:12(4)ರ ಅನುಸಾರ ಮೂರು ತಿಂಗಳೊಳಗೆ ಲೋಕಾಯುಕ್ತಕ್ಕೆ ವರದಿಯನ್ನು ನೀಡುವಂತೆ ಕೋರಿರುತ್ತಾರೆ.

ಕ್ರಮ ಸಂಖ್ಯೆ (2)ರಲ್ಲಿ ಮಾನ್ಯ ಉಪಲೋಕಾಯುಕ್ತ ವರದಿಯಲ್ಲಿ ಶ್ರೀ. ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು ತ್ವರಿತಗತಿ ನ್ಯಾಯಾಲಯ ಕೊಳ್ಳೇಗಾಲ ಇವರು ಜಿಲ್ಲಾ ಸರ್ಕಾರಿ ಅಭಿಯೋಜಕರ ಕಛೇರಿ ಚಾಮರಾಜನಗರದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿಯವರು ಶ್ರೀ. ಮಹಮದ್ ವಸೀವುಲ್ಲಾ ಬಿನ್ ಷಫಿವುಲ್ಲಾ ವಕೀಲರು, ಉತ್ತವಳ್ಳಿ (ಗ್ರಾಮ) ಮತ್ತು ಅಂಚೆ, ಚಾಮರಾಜನಗರ ತಾಲ್ಲೂಕ್ ಮತ್ತು ಜಿಲ್ಲೆ ಇವರು ಅವರಿಗೆ ಸಂಬಂಧಿಸಿದ ವ್ಯಕ್ತಿ ಶ್ರೀ ನಸರುಲ್ಲಾ ಇವರು ನ್ಯಾಯಾಲಯ ಬಂಧನದಲ್ಲಿದ್ದು, ಇವರನ್ನು ಬಂಧನದಿಂದ ಬಿಡಿಸಲು ಸದರಿಯವರ ಪರವಾಗಿ

ಶ್ರೀ. ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು, ತ್ವರಿತಗತಿ ನ್ಯಾಯಾಲಯ, ಕೊಳ್ಳೇಗಾಲ ಇವರನ್ನು ನ್ಯಾಯಾಲಯದ ಬಂಧನದಲ್ಲಿದ್ದ ವ್ಯಕ್ತಿಯನ್ನು ಬಿಡುಗಡೆಗೊಳಿಸುವ ಬಗ್ಗೆ ಸಂಪರ್ಕಿಸಿದಾಗ ದಿನಾಂಕ:05–11–2012ರಂದು ರೂ.2000=00ಗಳ ಲಂಚದ ಹಣವನ್ನು ಪಡೆಯುತ್ತಿದ್ದಾಗ ಲೋಕಾಯುಕ್ತರು ಬೀಸಿದ ಬಲೆಗೆ ಸಿಕ್ಕಿ ಬಿದ್ದಿದ್ದು, ಪ್ರಕರಣವನ್ನು ಲೋಕಾಯುಕ್ತ ಠಾಣೆ, ಚಾಮರಾಜನಗರ ಇಲ್ಲಿ ಮೊ.ಸಂ:06/2012 ಅನ್ನು ದಾಖಲಿಸಿಕೊಳ್ಳಲಾಗಿದೆ ಎಂದು ತಿಳಿಸಿ, ಸದರಿಯವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದು ಕಂಡುಬಂದಿರುವುದರಿಂದ ಮತ್ತು ಶ್ರೀ. ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು ತ್ವರಿತಗತಿ ನ್ಯಾಯಾಲಯ ಕೊಳ್ಳೇಗಾಲ. ಕರ್ನಾಟಕ ನಾಗರೀಕ ಸೇವಾ(ನಡತೆ) ನಿಯಮಾವಳಿಗಳ ನಿಯಮ 3(1) ಮತ್ತು (iii)ನ್ನು ಉಲಂಘಿಸಿರುವುದರಿಂದ ಸದರಿಯವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14–ಎ ಅನುಸಾರ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಮಾನ್ಯ ಉಪ ಲೋಕಾಯುಕ್ತರಿಗೆ ಪ್ರಕರಣವನ್ನು ವಹಿಸಲು ಕೋರಿರುತ್ತಾರೆ.

ಸರ್ಕಾರವು ಮಾನ್ಯ ಉಪ ಲೋಕಾಯುಕ್ತರು ಇವರ ವರದಿಯನ್ನು ಪರಿಶೀಲಿಸಿ ಶ್ರೀ. ಹೆಚ್.ಎಂ.ರಘುಕುಮಾರ್ ಇವರು ಲಂಚ ಪ್ರಕರಣದಲ್ಲಿ ಒಳಗೊಂಡಿರುವುದು ಸ್ಪಷ್ಟವಾಗಿ ಗೋಚರಿಸುವುದರಿಂದ ಸದರಿಯವರ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, ನಿಯಮ 14–ಎ ಅನುಸಾರ ಉಪಲೋಕಾಯುಕ್ತರಿಗೆ ವಹಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 01 ಪಿಪಿಇ 2013, ಬೆಂಗಳೂರು, ದಿನಾಂಕ : 18ನೇ ಜನವರಿ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ. ಹೆಚ್.ಎಂ.ರಘುಕುಮಾರ್ ಸರ್ಕಾರಿ ಅಭಿಯೋಜಕರು, ತ್ವರಿತಗತಿ ನ್ಯಾಯಾಲಯ, ಕೊಳ್ಳೇಗಾಲ ಇವರು ಈ ಹಿಂದೆ ಜಿಲ್ಲಾ ಸರ್ಕಾರಿ ಅಭಿಯೋಜಕರ ಕಛೇರಿ, ಚಾಮರಾಜನಗರ ನ್ಯಾಯಾಲಯ, ಇಲ್ಲಿ ಇವರ ವಿರುದ್ಧದ ಲೋಕಾಯುಕ್ತ ಪ್ರಕರಣ ಮೊ.ಸಂ:06/2012ರ ಅಪಾದನೆಗೆ ಸಂಬಂಧಿಸಿದಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14–ಎರನ್ವಯ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವೆಂದ್ರಪ್ಪ ಕಟ್ಟಿಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು–ಬಿ)

PR: 87

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

ವಿಷಯ: **ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಅಧ್ಯಾದೇಶ 2013ನ್ನು ಅನುಷ್ಠಾನಗೊಳಿಸುವ ಸಂಬಂಧ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಜಿಲ್ಲಾ ಕುಂದುಕೊರತೆಗಳ ನಿವಾರಣಾ ಅಧಿಕಾರಿಗಳನ್ನಾಗಿ ನೇಮಿಸುವ ಕುರಿತು.**

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ದಿನಾಂಕ. 05.07.2013 ರಂದು ಕೇಂದ್ರ ಸರ್ಕಾರದ ವಿಶೇಷ ಗೆಜೆಟ್ ಪ್ರಕಟಣೆಯಲ್ಲಿ ದೇಶದಾದ್ಯಂತ ಆಹಾರ ಭದ್ರತೆಯನ್ನು ಒದಗಿಸಲು ಆಹಾರ ಧಾನ್ಯಗಳನ್ನು ವಿತರಿಸುವ 2013ರ ರಾಷ್ಟ್ರೀಯ ಆಹಾರ ಭದ್ರತಾ ಆದ್ಯಾದೇಶ 2013ನ್ನು ಜಾರಿಗೆ ತಂದಿರುತ್ತದೆ. ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ 2013ನ್ನು ಸಂಸತ್ತು ಅಂಗೀಕರಿಸಿದೆ. ಆಹಾರ ಭದ್ರತಾ ಕಾಯಿದೆಯನ್ನು ಅನುಷ್ಠಾನಗೊಳಿಸಲು ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ 2013 ಸೆಕ್ಷನ್ 15 ರನ್ವಯ ರಾಜ್ಯದ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಸಾರ್ವಜನಿಕ ಕುಂದುಕೊರತೆ ನಿವಾರಣಾ ಅಧಿಕಾರಿಗಳನ್ನಾಗಿ ನೇಮಿಸಬೇಕಾಗಿರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 52 ಡಿಆರ್ಎ 2013, ಬೆಂಗಳೂರು, ದಿನಾಂಕ. 05.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಷ್ಟ್ರೀಯ ಆಹಾರ ಭದ್ರತಾ ಅಧ್ಯಾದೇಶ 2013 ಸೆಕ್ಷನ್ 15 ರನ್ವಯ ಎಲ್ಲಾ ಜಿಲ್ಲೆಯ ಜಿಲ್ಲಾಧಿಕಾರಿಗಳನ್ನು ಜಿಲ್ಲಾ ಕುಂದುಕೊರತೆ ನಿವಾರಣಾ ಅಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

P.R. 181
SC - 200

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

ವಿಷಯ: **ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಅಧ್ಯಾದೇಶ 2013ನ್ನು ಅನುಷ್ಠಾನಗೊಳಿಸುವ ಬಗ್ಗೆ ಜಿಲ್ಲಾ ನೋಡಲ್ ಅಧಿಕಾರಿಗಳನ್ನು ನೇಮಿಸುವ ಕುರಿತು.**

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು ದಿನಾಂಕ. 05.07.2013 ರಂದು ಕೇಂದ್ರ ಸರ್ಕಾರದ ವಿಶೇಷ ಗೆಜೆಟ್ ಪ್ರಕಟಣೆಯಲ್ಲಿ ದೇಶದಾದ್ಯಂತ ಆಹಾರ ಭದ್ರತೆಯನ್ನು ಒದಗಿಸಲು ಆಹಾರ ಧಾನ್ಯಗಳನ್ನು ವಿತರಿಸುವ 2013ರ ರಾಷ್ಟ್ರೀಯ ಆಹಾರ ಭದ್ರತಾ ಆದೇಶ 2013ನ್ನು ಜಾರಿಗೆ ತಂದಿರುತ್ತದೆ. ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ 2013ನ್ನು ಸಂಸತ್ತು ಅಂಗೀಕರಿಸಿದೆ. ಆಹಾರ ಭದ್ರತಾ ಕಾಯಿದೆಯನ್ನು ಅನುಷ್ಠಾನಗೊಳಿಸಲು ರಾಷ್ಟ್ರೀಯ ಆಹಾರ ಭದ್ರತಾ ಅಧ್ಯಾದೇಶ 2013 ಸೆಕ್ಷನ್ 14 ರನ್ವಯ ರಾಜ್ಯದಲ್ಲಿ ಸಹಾಯಕ ನಿರ್ದೇಶಕರನ್ನು ನೋಡಲ್ ಅಧಿಕಾರಿಗಳನ್ನಾಗಿ ನೇಮಿಸಬೇಕಾಗಿರುತ್ತದೆ. ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 52 ಡಿಆರ್ಎ 2013, ಬೆಂಗಳೂರು, ದಿನಾಂಕ. 05.09.2013**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರಾಷ್ಟ್ರೀಯ ಆಹಾರ ಭದ್ರತಾ ಕಾಯಿದೆ ಮತ್ತು ಅಧ್ಯಾದೇಶ 2013 ಸೆಕ್ಷನ್ 14 ರನ್ವಯ ಸಾರ್ವಜನಿಕ ಕುಂದುಕೊರತೆಗಳ ನಿವಾರಣೆಗಾಗಿ ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ರಾಜ್ಯದ ಎಲ್ಲಾ ಜಿಲ್ಲಾ ಉಪ ನಿರ್ದೇಶಕರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಹಾಯಕ ನಿರ್ದೇಶಕರುಗಳನ್ನು ನೋಡಲ್ ಅಧಿಕಾರಿಗಳನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್.ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 182**

**SC - 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಅನ್ನಭಾಗ್ಯ ಯೋಜನೆಯಡಿ ನ್ಯಾಯಬೆಲೆ ಅಂಗಡಿ ಮತ್ತು ಜಿಲ್ಲಾಮಟ್ಟದಲ್ಲಿ ಜಾಗೃತ ಸಮಿತಿಗಳ ರಚನೆಯ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ, 2001.
2. ಸರ್ಕಾರದ ಆದೇಶ ಸಂಖ್ಯೆ: ಆನಾಸ 34 ಡಿಆರ್‌ಎ 2003, ದಿನಾಂಕ : 04-4-2003.
3. ಸರ್ಕಾರದ ಆದೇಶ ಸಂಖ್ಯೆ: ಆನಾಸ 148 ಡಿಆರ್‌ಎ 2010, ದಿನಾಂಕ : 29-10-2011.
4. ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆ, 2013.

**ಪ್ರಸ್ತಾವನೆ :**

ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ (TPDS) ಯಡಿಯಲ್ಲಿ ನ್ಯಾಯಬೆಲೆ ಅಂಗಡಿ ಮತ್ತು ಜಿಲ್ಲಾ ಮಟ್ಟದ ಜಾಗೃತ ಸಮಿತಿಗಳನ್ನು ರಚಿಸಬೇಕಾಗಿದೆ. ರಾಷ್ಟ್ರೀಯ ಆಹಾರ ಭದ್ರತೆ ಕಾಯ್ದೆಯನ್ವಯವೂ ಸಹ ಜಾಗೃತ ಸಮಿತಿಗಳನ್ನು ರಚಿಸುವುದು ಕಡ್ಡಾಯವಾಗಿರುತ್ತದೆ. ಸದರಿ ಜಾಗೃತ ಸಮಿತಿಗಳ ಸಭೆಗಳನ್ನು ನಿಯಮಿತವಾಗಿ ನಡೆಸುವ ಬಗ್ಗೆ ಉಲ್ಲೇಖ (1)ರ ಸಾರ್ವಜನಿಕ ವಿತರಣಾ ಪದ್ಧತಿ (ನಿಯಂತ್ರಣ) ಆದೇಶ 2001 (Public Distribution System (Control) Order, 2001)ರ ಅನುಬಂಧದ ಪ್ಯಾರ 6(3)ರಲ್ಲಿ ಷರತ್ತು ವಿಧಿಸಲಾಗಿರುತ್ತದೆ.

ಜುಲೈ 2013ರಲ್ಲಿ ಸರ್ಕಾರವು "**ಅನ್ನಭಾಗ್ಯ**" ಯೋಜನೆಯನ್ನು ರಾಜ್ಯದಲ್ಲಿ ಜಾರಿಗೊಳಿಸಿರುತ್ತದೆ. ಅನ್ನಭಾಗ್ಯ ಯೋಜನೆಯಡಿ ಪರಿಣಾಮಕಾರಿಯಾಗಿ ಆಹಾರ ಧಾನ್ಯಗಳನ್ನು ವಿತರಣೆ ಮಾಡಲು ನ್ಯಾಯಬೆಲೆ ಅಂಗಡಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಾಗೃತ ಸಮಿತಿಗಳನ್ನು ಪುನರ್ರಚಿಸಿ ಬಲಪಡಿಸಲಾಗುತ್ತಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಆನಾಸ 144 ಡಿಆರ್‌ಎ 2013, ಬೆಂಗಳೂರು, ದಿನಾಂಕ : 26ನೇ ಅಕ್ಟೋಬರ್, 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ನ್ಯಾಯಬೆಲೆ ಅಂಗಡಿ ಹಂತದ ಮತ್ತು ಜಿಲ್ಲಾ ಮಟ್ಟದ ಜಾಗೃತ ಸಮಿತಿಗಳನ್ನು ಈ ಕೆಳಕಂಡಂತೆ ಪುನರ್‌ರಚಿಸಲಾಗಿದೆ. ಜಿಲ್ಲಾ ಉಸ್ತುವಾರಿ ಸಚಿವರು ನ್ಯಾಯಬೆಲೆ ಅಂಗಡಿ ಮತ್ತು ಜಿಲ್ಲಾ ಮಟ್ಟದ ಜಾಗೃತಿ ಸಮಿತಿಗಳಿಗೆ ಸರ್ಕಾರೇತರ ಸದಸ್ಯರುಗಳ ಹೆಸರುಗಳನ್ನು ಶಿಫಾರಸ್ಸು ಮಾಡತಕ್ಕದ್ದು.

**2. ನ್ಯಾಯಬೆಲೆ ಅಂಗಡಿ ಮಟ್ಟದ ಜಾಗೃತ ಸಮಿತಿ:**

ನ್ಯಾಯಬೆಲೆ ಅಂಗಡಿ ಮಟ್ಟದ ಜಾಗೃತ ಸಮಿತಿಯಲ್ಲಿ ನಾಮನಿರ್ದೇಶನ ಮಾಡುವ ಐದು ಸದಸ್ಯರುಗಳ ಪೈಕಿ ಇಬ್ಬರು ಮಹಿಳಾ ಸದಸ್ಯರುಗಳಿರಬೇಕು ಹಾಗೂ ಅವರುಗಳಲ್ಲಿ ಒಬ್ಬರು ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರಬೇಕು ಹಾಗೂ ಇನ್ನುಳಿದ ಮೂರು ಸದಸ್ಯರುಗಳ ಪೈಕಿ ಒಬ್ಬ ಸದಸ್ಯರು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು. ಉಳಿದ ಇತರೆ ಸದಸ್ಯರುಗಳು ಸ್ವಸಹಾಯ ಸಂಸ್ಥೆಗಳಿಂದ ಅಥವಾ ಜಿಲ್ಲಾ ಉಸ್ತುವಾರಿ ಸಚಿವರ ಶಿಫಾರಸ್ಸಿನಂತಿರಬಹುದು.

**3. ಜಿಲ್ಲಾ ಜಾಗೃತ ಸಮಿತಿ**

| | |
|---|---|
| 1. ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. ಜಿಲ್ಲಾಧಿಕಾರಿಗಳು | – ಸದಸ್ಯರು |
| 4. ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| 5. ಇಬ್ಬರು ಮಹಿಳಾ ಸದಸ್ಯರು ಅವರಲ್ಲಿ ಒಬ್ಬರು ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ ಸದಸ್ಯರಾಗಿರಬೇಕು. | – 2ಸದಸ್ಯರು |
| 6. ಮೂರು ಸದಸ್ಯರ ಪೈಕಿ ಒಂದು ಹಿಂದುಳಿದ ವರ್ಗಕ್ಕೆ ಸೇರಿರಬೇಕು ಹಾಗೂ ಉಳಿದ ಇತರೆ ಸದಸ್ಯರುಗಳು ಸ್ವಸಹಾಯ ಸಂಸ್ಥೆಗಳಿಂದ ಅಥವಾ ಜಿಲ್ಲಾ ಉಸ್ತುವಾರಿ ಸಚಿವರ ಶಿಫಾರಸ್ಸಿನಂತಿರಬಹುದು | – 3ಸದಸ್ಯರು |
| 7. ಜಿಲ್ಲಾ ಆಹಾರ ಉಪ ನಿರ್ದೇಶಕರು/ ಸಹಾಯಕ ನಿರ್ದೇಶಕರು | – ಸದಸ್ಯ-ಕಾರ್ಯದರ್ಶಿ |

4. ನ್ಯಾಯಬೆಲೆ ಅಂಗಡಿ ಮಟ್ಟದ ಜಾಗೃತ ಸಮಿತಿಯು ನ್ಯಾಯಬೆಲೆ ಅಂಗಡಿಯಲ್ಲಿ ಲಭ್ಯವಿರುವ ದಾಸ್ತಾನನ್ನು ಹಾಗೂ ಪಡಿತರ ಚೀಟಿದಾರರಿಗೆ ದಾಸ್ತಾನಿನ ಸಮರ್ಪಕ ವಿತರಣೆಯನ್ನು ಮೇಲುಸ್ತುವಾರಿ ಮಾಡತಕ್ಕದ್ದು. ಅರ್ಹ ಫಲಾನುಭವಿಗಳಿಗೆ ಪಡಿತರ ಚೀಟಿಯನ್ನು ನೀಡದಿರುವುದೇನಾದರೂ ಕಂಡುಬಂದಲ್ಲಿ ಜಾಗೃತ ಸಮಿತಿಯು ಅದನ್ನು ಆಹಾರ ನಿರೀಕ್ಷಕರ ಗಮನಕ್ಕೆ ತರತಕ್ಕದ್ದು. ವಿತರಿಸಲಾಗುತ್ತಿರುವ ಆಹಾರಧಾನ್ಯ ಮತ್ತು ಸೀಮೆಎಣ್ಣೆಯ ಬೆಲೆ ಮತ್ತು ಪ್ರಮಾಣವು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಲಾಗುವ ಸರ್ಕಾರಿ ಆದೇಶಕ್ಕನುಗುಣವಾಗಿದೆಯೇ ಎಂದು ಜಾಗೃತ ಸಮಿತಿಯು ಖಚಿತಪಡಿಸಿಕೊಳ್ಳತಕ್ಕದ್ದು.

5. ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಜಾಗೃತಿ ಸಮಿತಿಯು –

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ,
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ off take,

ಮತ್ತು

3. ಸ್ವೀಕೃತವಾಗಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.

ಹಾಗೂ

4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಸಲಹೆಗಳನ್ನು ನೀಡಬಹುದು.

6. ಇತರೆ ಷರತ್ತುಗಳು:

- ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು.
- ಯಾವುದೇ ಸರ್ಕಾರೇತರ ಸದಸ್ಯರಿಗೆ ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.
- ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ, ನ್ಯಾಯಬೆಲೆ ಅಂಗಡಿ ಮತ್ತು ಜಿಲ್ಲಾ ಮಟ್ಟದ ಜಾಗೃತ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್. ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 183**
**SC - 500**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013 ರ ಅಧ್ಯಾಯ 6(13)(ಜೆ)ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆ ಪತ್ರದ ದಿನಾಂಕ 5.7.2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆಯಲ್ಲಿ ಪ್ರತಿಯೊಬ್ಬ ಪ್ರಜೆಗೂ ಆಹಾರ ಧಾನ್ಯಗಳು ಕಡ್ಡಾಯವಾಗಿ ಸಿಗುವ ದೃಷ್ಟಿಯಿಂದ ರಾಷ್ಟ್ರೀಯ ಆಹಾರ ಭದ್ರತೆ 2013ರ ಆದ್ಯಾದೇಶವನ್ನು ಜಾರಿಗೊಳಿಸಿದ್ದು, ಅಧ್ಯಾಯ 6(13)(ಜೆ) ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸುವುದು ಕಡ್ಡಾಯಗೊಳಿಸಿದೆ. ಬಹುತೇಕ ಪಡಿತರ ಚೀಟಿಗಳನ್ನು ಕುಟುಂಬದ ಅತ್ಯಂತ ಹಿರಿಯ ಪುರುಷ ಸದಸ್ಯರ ಹೆಸರಿನಲ್ಲಿ ನೀಡಲಾಗುತ್ತಿದೆ. ಪ್ರಸ್ತುತದಲ್ಲಿ ಮುಂದೆ ನೀಡಲಾಗುವ ಹೊಸ ಪಡಿತರ ಚೀಟಿ/ ಪಡಿತರ ಚೀಟಿಗಳಲ್ಲಿ ಸೇರ್ಪಡೆ/ಬೇರ್ಪಡೆ ಹಾಗೂ ತಿದ್ದುಪಡಿ ಇತ್ಯಾದಿ ಮಾಡುವ ಸಂದರ್ಭಗಳಲ್ಲಿ ಕಡ್ಡಾಯವಾಗಿ ಇನ್ನು ಮುಂದೆ ಕುಟುಂಬದ ಮಹಿಳಾ ಹಿರಿಯ ಸದಸ್ಯರನ್ನು ಕುಟುಂಬದ ಮುಖ್ಯಸ್ಥರೆಂದು ಪರಿಗಣಿಸಲು ತೀರ್ಮಾನಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 20 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ 31.10.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ರ ಅಧ್ಯಾಯ 6(13)(ಜೆ) ರ ಪ್ರಕಾರ ಕುಟುಂಬದ ಹಿರಿಯ ಮಹಿಳಾ ಸದಸ್ಯರನ್ನು ಪಡಿತರ ಚೀಟಿಯಲ್ಲಿ ಕುಟುಂಬದ ಮುಖ್ಯಸ್ಥರನ್ನಾಗಿ ನೇಮಿಸಬೇಕಾಗಿರುವುದರಿಂದ, ಇನ್ನು ಮುಂದೆ ಹೊಸ ಪಡಿತರ ಚೀಟಿಗಳನ್ನು ನೀಡುವ ಸಂದರ್ಭಗಳಲ್ಲಿ ಮತ್ತು ಪಡಿತರ ಚೀಟಿಗಳಲ್ಲಿ ಸೇರ್ಪಡೆ/ಬೇರ್ಪಡೆ ಹಾಗೂ ತಿದ್ದುಪಡಿ ಇತ್ಯಾದಿ ಮಾಡುವ ಸಂದರ್ಭಗಳಲ್ಲಿ ಕಡ್ಡಾಯವಾಗಿ ಕುಟುಂಬದ ಮಹಿಳಾ ಹಿರಿಯ ಸದಸ್ಯರನ್ನು ಕುಟುಂಬದ ಮುಖ್ಯಸ್ಥರೆಂದು ಪರಿಗಣಿಸಿ, ಪಡಿತರ ಚೀಟಿಗಳನ್ನು ನೀಡುವಂತೆ ಹಾಗೂ ಆಹಾರ ಇಲಾಖೆಯ ವೆಬ್ ಸೈಟಿನ ತಂತ್ರಾಂಶದಲ್ಲಿ ಸೂಕ್ತ ಮಾರ್ಪಾಡನ್ನು ಮಾಡುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 184**
**SC - 10**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ**

**ವಿಷಯ:** ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ನ್ನು ರಾಜ್ಯದಲ್ಲಿ ಅನುಷ್ಠಾನಗೊಳಿಸುವ – ಬಗ್ಗೆ.

**ಓದಲಾಗಿದೆ:** 1) ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆ ಪತ್ರದ ದಿನಾಂಕ 5.7.2013;

2) ಸರ್ಕಾರಿ ಆದೇಶ ಸಂಖ್ಯೆ:ಆನಾಸ 43 ಡಿಆರ್‌ಎ 2013, ದಿನಾಂಕ 15.6.2013.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕೇಂದ್ರ ಸರ್ಕಾರದ ವಿಶೇಷ ಪ್ರಕಟಣೆಯಲ್ಲಿ ಪ್ರತಿಯೊಬ್ಬ ಪ್ರಜೆಗೂ ಆಹಾರ ಧಾನ್ಯಗಳು ಕಡ್ಡಾಯವಾಗಿ ಸಿಗುವ ದೃಷ್ಟಿಯಿಂದ ರಾಷ್ಟ್ರೀಯ ಆಹಾರ ಭದ್ರತೆ 2013ರ ಅಧ್ಯಾದೇಶವನ್ನು ಜಾರಿಗೊಳಿಸಿದ್ದು, ಇದನ್ನು ರಾಜ್ಯ ಸರ್ಕಾರವು ರಾಜ್ಯದಲ್ಲಿ ಅನುಷ್ಠಾನಗೊಳಿಸಲು ಸಹಮತಿಸಿರುತ್ತದೆ. ನಂತರದಲ್ಲಿ ಸದರಿ ಅಧ್ಯಾದೇಶವನ್ನು ಸಂಸತ್ತು ಅಂಗೀಕರಿಸಿದ್ದು, ಕಾಯ್ದೆಯ ರೂಪವನ್ನು ಪಡೆದಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರಿ ಆದೇಶದಲ್ಲಿ ರಾಜ್ಯ ಸರ್ಕಾರವು ಜುಲೈ 2013ರಿಂದ ರಾಜ್ಯಾದ್ಯಂತ ಜಾರಿಗೆ ಬರುವಂತೆ **"ಅನ್ನ ಭಾಗ್ಯ"** ಯೋಜನೆಯನ್ನು ಪ್ರಾರಂಭಿಸಿದ್ದು, ಅದರಲ್ಲಿ ಏಕ ಸದಸ್ಯ ಹೊಂದಿರುವ ಪಡಿತರ ಚೀಟಿಗೆ 10 ಕಿಲೋ ಆಹಾರ ಧಾನ್ಯಗಳನ್ನು, ದ್ವಿಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ 20 ಕಿಲೋ ಆಹಾರ ಧಾನ್ಯವನ್ನು ಮತ್ತು ಮೂರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯವನ್ನು ನೀಡಲಾಗುತ್ತಿದೆ. ಆದರೆ, ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆಯ ಪ್ರಕಾರ ಪಡಿತರ ಚೀಟಿಯ ಪ್ರತಿಯೊಬ್ಬ ಸದಸ್ಯರಿಗೆ ಮಾಹೆಯಾನ 5 ಕಿಲೋ ಆಹಾರ ಧಾನ್ಯಗಳನ್ನು ನೀಡುವುದು ಕಡ್ಡಾಯವಾಗಿರುತ್ತದೆ. ಪ್ರಸ್ತುತ ಸರ್ಕಾರದ ಆದೇಶದಲ್ಲಿ 5 ಮತ್ತು ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯಗಳನ್ನು ಸೀಮಿತಗೊಳಿಸಲಾಗಿದೆ.

ಆದರೆ, ಆಹಾರ ಭದ್ರತೆ ಕಾಯ್ದೆಯ ಪ್ರಕಾರ ಕುಟುಂಬದ ಸದಸ್ಯರನ್ನಾಧರಿಸಿ ಕುಟುಂಬದ ಪ್ರತಿ ಸದಸ್ಯರಿಗೆ 5 ಕಿಲೋ ಆಹಾರ ಧಾನ್ಯಗಳನ್ನು ಕಡ್ಡಾಯವಾಗಿ ನೀಡಬೇಕಾಗಿರುವುದರಿಂದ, 6 ಮತ್ತು ಅದಕ್ಕಿಂತ ಹೆಚ್ಚಿನ ಸದಸ್ಯರನ್ನು ಒಳಗೊಂಡಿರುವ ಕುಟುಂಬದ ಪಡಿತರ ಚೀಟಿಗಳಿಗೆ ಆಹಾರ ಧಾನ್ಯಗಳನ್ನು ಯೂನಿಟ್ ಆಧಾರದ ಮೇಲೆ ಹೆಚ್ಚುವರಿ ಮಾಡುವುದು ಕಡ್ಡಾಯವಾಗಿರುತ್ತದೆ. ಆದ್ದರಿಂದ, ಒಂದು, ಎರಡು ಮತ್ತು 3ಕ್ಕಿಂತ ಹೆಚ್ಚು ಹಾಗೂ 6ಕ್ಕಿಂತ ಕಡಿಮೆ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಪ್ರಸ್ತುತ ಜಾರಿಯಲ್ಲಿರುವ ರಾಜ್ಯ ಸರ್ಕಾರದ ಆದೇಶದಂತೆಯೇ ಅಂದರೆ, ಏಕ ಸದಸ್ಯ ಹೊಂದಿರುವ ಪಡಿತರ ಚೀಟಿಗೆ 10 ಕಿಲೋ ಆಹಾರ ಧಾನ್ಯಗಳನ್ನು, ದ್ವಿಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ 20 ಕಿಲೋ ಆಹಾರ ಧಾನ್ಯವನ್ನು ಮತ್ತು ಮೂರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಗರಿಷ್ಠ 30 ಕಿಲೋ ಆಹಾರ ಧಾನ್ಯವನ್ನು ಹಾಗೂ 7 ಮತ್ತು ಅದಕ್ಕಿಂತ ಹೆಚ್ಚು ಕುಟುಂಬ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗೆ ಪ್ರತಿ ಹೆಚ್ಚುವರಿ ಸದಸ್ಯರಿಗೆ 5 ಕಿಲೋ ಆಹಾರ ಧಾನ್ಯಗಳನ್ನು ನೀಡಲು ತೀರ್ಮಾನಿಸಲಾಗಿದೆ. ಅದರಂತೆ ಈ ಕೆಳಕಂಡಂತೆ ಆದೇಶ;

**ಸರ್ಕಾರದ ಆದೇಶ ಸಂಖ್ಯೆ: ಆನಾಸ 20 ಆರ್‌ಪಿಆರ್ 2013, ಬೆಂಗಳೂರು, ದಿನಾಂಕ 31.10.2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ, 2013ನ್ನು ರಾಜ್ಯದಲ್ಲಿ ಸಮರ್ಪಕವಾಗಿ ಅನುಷ್ಠಾನಗೊಳಿಸಲು, 6 ಸದಸ್ಯರಿರುವ ಕುಟುಂಬಕ್ಕೆ ಪ್ರಸ್ತುತ ರಾಜ್ಯವು 30 ಕೆ.ಜಿ. ಆಹಾರ ಧಾನ್ಯವನ್ನು ನೀಡುತ್ತಿದ್ದು, 7 ಸದಸ್ಯರು ಅಥವಾ ಅದಕ್ಕಿಂತ ಹೆಚ್ಚು ಸದಸ್ಯರಿರುವ ಕುಟುಂಬಗಳಿಗೆ ಅನ್ವಯವಾಗುವಂತೆ ಪ್ರತಿ ಹೆಚ್ಚುವರಿ ಸದಸ್ಯರಿಗೆ ಹೆಚ್ಚುವರಿಯಾಗಿ 5 ಕಿಲೊ ಆಹಾರ ಧಾನ್ಯಗಳನ್ನು ನವೆಂಬರ್ 1. 2013ರಿಂದ ಜಾರಿಗೆ ಬರುವಂತೆ ನೀಡಲು ಆದೇಶಿಸಿದೆ. ಇನ್ನುಳಿದಂತೆ, ಸರ್ಕಾರದ ಆದೇಶ ಸಂಖ್ಯೆ:ಆನಾಸ 43 ಡಿಆರ್‌ಎ 2013, ದಿನಾಂಕ 15.6.2013ರಲ್ಲಿನ ಆದೇಶವನ್ನೇ ಮುಂದುವರೆಸಲಾಗಿದೆ.

ಆಯುಕ್ತರು, ಆನಾಸ ಇಲಾಖೆಯವರು 6 ಹಾಗೂ ಅದಕ್ಕಿಂತ ಹೆಚ್ಚುವರಿ ಸದಸ್ಯರನ್ನು ಹೊಂದಿರುವ ಪಡಿತರ ಚೀಟಿಗಳ ತಾಲ್ಲೂಕು/ಜಿಲ್ಲಾವಾರು ಅಂಕಿ–ಅಂಶದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವುದು ಹಾಗೂ ಆಹಾರ ಇಲಾಖೆಯ ವೆಬ್ ಸೈಟಿನ ತಂತ್ರಾಂಶದಲ್ಲಿ ಈ ವಿವರಗಳನ್ನು ಕೂಡಲೇ ಅಳವಡಿಸಲು ಸೂಕ್ತವಾಗಿ ಮಾರ್ಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ.ಆರ್.ವಿಜಯಾನಂದ ಶರ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

**P.R. 185**
**SC - 10**

*ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59*